# ಕೃಷ್ಣಂ ವಂದೇ ಜಗದ್ಗುರುಂ



ಉಪನಿಷದ್ ರತ್ನಾಕರ, ಮಹಾಮಹೋಪಾಧ್ಯಾಯ

ವಿದ್ವಾನ್ ಡಾ|| ಕೆ. ಜಿ. ಸುಬ್ರಾಯಶರ್ಮಾ




**"ದಾನದ ಮಹಿಮೆ"**-99ನೇ ಕೃತಿರತ್ನದ ಲೋಕಾರ್ಪಣ ಸಮಾರಂಭ: 27-9-2018, ಗುರುವಾರ
ಸನ್ಮಾನ್ಯರಾದ ಪಿ. ಆರ್. ಶಿವಶಂಕರ್, ಶಿವಸ್ವಾಮಿ, ಜಿ. ಎಸ್. ಟಿ. ಪ್ರಭು
ಶ್ರೀ ಸದಾನಂದಗಿರಿ ಸ್ವಾಮೀಜಿಯವರೊಂದಿಗೆ ಡಾ॥ ಕೆ. ಜಿ. ಸುಬ್ರಾಯಶರ್ಮಾ ದಂಪತಿಗಳು




**"ದಾನದ ಮಹಿಮೆ"**-99ನೇ ಕೃತಿಯ ಲೋಕಾರ್ಪಣ ಸಮಾರಂಭದಲ್ಲಿ
ಶ್ರೀ ಶಿವಸ್ವಾಮಿಗಳು ಗ್ರಂಥವನ್ನು ಪರಿಚಯಿಸುತ್ತಿದ್ದಾರೆ; 27-9-2018, ಗುರುವಾರ

ಆನಂದಗ್ರಂಥಮಾಲಾ–ಕುಸುಮ 102

# ಕೃಷ್ಣಂ ವಂದೇ ಜಗದ್ಗುರುಂ

**ಪ್ರವಚನಕಾರರು ಮತ್ತು ಲೇಖಕರು**

ಅಧ್ಯಾತ್ಮವಿದ್ಯಾಪ್ರವೀಣ, ವೇದವಿದ್ಯಾಭೂಷಣ, ಅದ್ವೈತಜ್ಞಾನಸಿಂಧು, ವಿದ್ಯಾವಿಧಿನಿಧಿ, ವೇದಶ್ರೀ, ವೇದಾಂತವಾರಿಧಿ, ವೇದಾಂತಭಾಸ್ಕರ, ವೇದಾಂತಸರಸ್ವತಿ, ವೇದಾಂತಕೇಸರಿ, ವೇದಾಂತ ಸಾರ್ವಭೌಮ, ವೇದಾಂತಕಾಮಧೇನು, ವೇದಾಂತರಾಜಹಂಸ, ವಿವೇಕ ಭಾಸ್ಕರ, ಶಾಸ್ತ್ರನಿಧಿ, ಅದ್ವೈತವೇದಾಂತಕೇಸರಿ, ಅದ್ವೈತಜ್ಞಾನತೇಜ, ವೇದಾಂತಸಾಗರ, ವೇದಾಂತರತ್ನ, ಶಾಸ್ತ್ರವಿದ್ಯಾನಿಧಿ, ವೇದಾಂತಚಿಂತಾಮಣಿ, ಅದ್ವೈತಸಾರತಿಲಕ, ವೇದಾಂತಪ್ರಭಾಕರ, ಅದ್ವೈತ ವೇದಾಂತವಾರಿಧಿ, ಅದ್ವೈತವೇದಾಂತಚೂಡಾಮಣಿ, ಅದ್ವೈತವೇದತಿಲಕ, ಅದ್ವೈತ ವೇದಾಂತವಿಚಕ್ಷಣ, ವೇದಾಂತಸಾರತಿಲಕ, ವೇದಾಗಮವಿದ್ಯಾಸಾಗರ, ಸುವರ್ಣಕರ್ನಾಟಕ ಕನ್ನಡಿಗ, ಭುವಿ ವೇದಾಂತೈಕಶ್ರೇಷ್ಠರತ್ನ, ರಾಷ್ಟ್ರರತ್ನ, ಸುವರ್ಣಕರ್ನಾಟಕ ಸುವರ್ಣವೇದಾಂತಿ, ವೇದಾಂತರತ್ನಾಕರ, ಸ್ವರ್ಣಭೂಷಣ, ವೇದಾಂತಗಂಗಾಧರ, ಅದ್ವೈತವೇದಾಂತವಾಚಸ್ಪತಿ, ಅದ್ವೈತವೇದಾಂತಶಿಖಾಮಣಿ, ಗೋವಿಂದಲಕ್ಷ್ಮೀಪುರಸ್ಕಾರ, ಬಸವನಗುಡಿರತ್ನ, ಶ್ರೀ ಶ್ರೀ ಸದ್ಗುರುಹೃದಯಭಾಸ್ಕರ, ಅದ್ವೈತವೇದಾಂತ ಸವ್ಯಸಾಚಿ, ಸದ್ಗುರು ಸೇವಾ ಧುರೀಣ, ಪರಿಪೂರ್ಣ ಮಹನೀಯ ೨೦೧೨, ಮಂತ್ರಾಲಯದ ಶ್ರೀಶ್ರೀಸುಶಮೀಂದ್ರತೀರ್ಥಸ್ವಾಮೀಜಿ **"ರಾಷ್ಟ್ರೀಯ ಜ್ಞಾನ ಪುರಸ್ಕಾರ"**, ಅದ್ವೈತ ವೇದಾಂತ ಪ್ರತಿಭಾ ಪ್ರಕಾಶ, ಜಿಜ್ಞಾಸುಕಾಮಧೇನು, ಮುಮುಕ್ಷುಮೋಕ್ಷಧೇನು, ಉಪನಿಷದ್ ರತ್ನಾಕರ, ಶ್ರೀ ಸಿದ್ಧಾರೂಢ ಸದ್ಭಾವನಾ ಪ್ರಶಸ್ತಿ, ವೇದಾಂತ ಪ್ರವಚನ ಚತುರ, ವೇದಾಂತ ಪುರುಷಮಣಿ, ಶಾಂಕರಾದ್ವೈತವೇದಾಂತಾಚಾರ್ಯ, ಅದ್ವೈತವೇದಾಂತಸಾರಥಿ, ಶ್ರೀಪ್ರಸನ್ನಗಣಪತಿ (ಬಲಮುರಿ) ಅನುಗ್ರಹ ಪ್ರಶಸ್ತಿ—೨೦೧೫, ಪ್ರಾಜ್ಞ ವೇದಾಂತ ಯೋಗ, ವೇದಾಂತ ಚಕ್ರವರ್ತಿ, ಸರ್ವಋತು ಪ್ರವಚನಕಾರ, ವೇದಾಂತವಿದ್ಯಾಕೌಸ್ತುಭ, ಅಧ್ಯಾತ್ಮಪ್ರವಚನಭೂಷಣ, "೭೦ರ ವೀರ ವೇದಾಂತಿ", ಶಾಂಕರಭಾಷ್ಯಭಾಸ್ಕರ, ವೇದ ವಾರಿಧಿ ಬ್ರಹ್ಮವಿದ್ಯಾಪಾರಂಗತ, ಸಹೃದಯ ಅಧ್ಯಾತ್ಮ ಚಿಂತಕ, ವಿಪ್ರರತ್ನಶಿರೋಮಣಿ, ಅದ್ಭುತ ಶಾಂಕರರತ್ನ **ಸುವರ್ಣ ಕರ್ನಾಟಕ "ರಾಜ್ಯೋತ್ಸವ ಪ್ರಶಸ್ತಿ"—೨೦೦೫**, ಮತ್ತು **"ಸುವರ್ಣ ಕರ್ನಾಟಕ ಸಾಹಿತ್ಯ ಪ್ರಶಸ್ತಿ"** ಪುರಸ್ಕೃತ,

**ಅದ್ವೈತ ವಾಚಸ್ಪತಿ, ಮಹಾಮಹೋಪಾಧ್ಯಾಯ ವೇ. ಬ್ರ. ಶ್ರೀ ವಿದ್ವಾನ್**

**ಡಾ|| ಕೆ. ಜಿ. ಸುಬ್ರಾಯಶರ್ಮಾ**, ಎಂ.ಎ., ಡಿ.ಲಿಟ್.

**(ಶ್ರೀಶ್ರೀಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳ ಅಂತೇವಾಸಿ ಸಾಕ್ಷಾತ್‌ಶಿಷ್ಯರು)**

**ಶ್ರೀ ನಿತ್ಯಾನಂದ ಪ್ರಿಂಟರ್ಸ್**

ಅಶೋಕನಗರ, ಬೆಂಗಳೂರು - 560 050

**ಸೆಪ್ಟೆಂಬರ್ 2018**

“ಕೃಷ್ಣಂ ವಂದೇ ಜಗದ್ಗುರುಂ” – 102
**“KRISHNAM VANDE JAGADGURUM” – 102**
**102nd** Flower in the ‘**Aananda Grantha Maalaa**’ Series
*by* Vedanta Chakravarthi, **Mahaamahopaadhyaaya**
Vidwan **Dr. K. G. SUBRAYA SHARMA, M.A., D.Litt.**
# 127, **“Seetha-Preethi”**, Balaji Nagar,
ICICI Bank Cross Road, Uttarahalli Main Road
**P. O. Subrahmanyapura, Bengaluru - 560 061**
**Ph : 080-2639 6786 ; Mobile : 98862 81622**
e-mail: kgssharma@gmail.com
website: kgssharma.in

**Pages: 48; Price: Rs. 40/- ; ಬೆಲೆ: ರೂ. 40/-**

**First Edition : September 2018 ; 1000 Copies**



**For Copies and other Books Please Contact**
**Vedanta Ratna, Mahaamahopaadhyaaya, Vidwan**
**Dr. K. G. SUBRAYA SHARMA, M.A., D.Litt.**
**# 127, “Seetha-Preethi”, Balaji Nagar,**
**ICICI Bank Cross Rd., Uttarahalli Main Rd.**
**P. O. Subrahmanyapura, Bengaluru - 560 061**
**Ph: 080-2639 6786 ; Mobile: 98862 81622**
**e-mail: kgssharma@gmail.com**
**website: kgssharma.in**

*Printed and Published by*
B. N. Nataraj
Sri Nithyananda Printers
# 46, 4th Cross, Ashoknagar, BSK 1st Stage
Bengaluru - 560 050. ✆ 2242 6027

# ನಮೋ ನಮಃ ಸದ್ಗುರುಪಾದುಕಾಭ್ಯಾಮ್

ನನಗೆ ಅಶನ, ವಸನ, ಸಂಸ್ಕಾರ, ಬ್ರಹ್ಮವಿದ್ಯೆಯನ್ನು ಅನುಗ್ರಹಮಾಡಿ ನನ್ನನ್ನು ಸದಾ ತಮ್ಮ ಜೊತೆಯಲ್ಲಿಯೇ ಇಟ್ಟುಕೊಂಡು ನನಗೆ ಸೇವಾಭಾಗ್ಯವನ್ನು ಕರುಣಿಸಿರುವ ನನ್ನ ಪ್ರತ್ಯಕ್ಷದೇವತೆಯೂ ನನ್ನ ಸಾಕ್ಷಾತ್ ಶಂಕರಸದ್ಗುರುಗಳೂ ಆದ ನನ್ನ ಪ್ರೀತಿಯ **ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳವರಿಗೆ** ನನ್ನ ಭಕ್ತಿಪೂರ್ವಕ ಪ್ರಣಾಮಗಳನ್ನು ನಾನಿಲ್ಲಿ ನಿರ್ವಂಚನೆಯಿಂದ ಹಾಗೂ ಪ್ರೀತಿಯಿಂದ ಸಮರ್ಪಿಸುತ್ತಿದ್ದೇನೆ. ನನ್ನಿಂದ ಸದ್ಗುರುಗಳು ಶ್ರೀರಾಮದೇವರ ನಿತ್ಯಪೂಜೆಯನ್ನೂ ಮಾಡಿಸುತ್ತಿದ್ದರು; ಮತ್ತು ಶಿವರಾತ್ರಿ, ನೃಸಿಂಹಜಯಂತಿ, ಶ್ರೀರಾಮನವಮೀ, ದೇವೀ ನವರಾತ್ರಿ, ಗೋಕುಲಾಷ್ಟಮೀ ಸಂದರ್ಭಗಳಲ್ಲಿ ಆಯಾ ದೇವತೆಗಳ ಪೂಜೆಯನ್ನೂ ಅಚ್ಚುಕಟ್ಟಾಗಿ ಮಾಡಿಸುತ್ತಿದ್ದರು. **ಗೀತಾ ಜಯಂತಿ** ಹಾಗೂ ಕೃಷ್ಣಜನ್ಮಾಷ್ಟಮಿಗಳಲ್ಲಿ ವಿಶೇಷವಾಗಿ ಶ್ರೀಕೃಷ್ಣನ ವಿಚಾರ ಗಳನ್ನೆಲ್ಲ ನನ್ನ ಸದ್ಗುರುಗಳು ನನಗೆ ಹೇಳುತ್ತಿದ್ದರು.

ಶ್ರೀಮದ್ಭಗವದ್ಗೀತೆಯನ್ನು ನನಗೆ ಪಾಠಮಾಡುವಾಗ ಶ್ರೀಶ್ರೀಗಳವರು ಗೀತಾಚಾರ್ಯನ ಮಹಿಮೆಗಳನ್ನೆಲ್ಲ ವಿಸ್ತಾರವಾಗಿ ತಿಳಿಸುತ್ತಿದ್ದರು, ಮತ್ತು ಗೀತೋಪನ್ಯಾಸಗಳನ್ನು ಮಾಡುವಾಗಲೂ ಸದ್ಗುರುಗಳು ಕಥೆ, ದೃಷ್ಟಾಂತಗಳನ್ನು ಕೊಟ್ಟು ಶ್ರೀಕೃಷ್ಣನ ಬಗ್ಗೆ ಸುಂದರವಾಗಿ ತುಂಬಾತುಂಬಾ ಹೇಳುತ್ತಿದ್ದರು. ಅಂಥ ವಿಷಯಗಳನ್ನೆಲ್ಲ ಇಂದಿಗೂ ನಾನೂ ನನ್ನ ನಿರಂತರ ಉಪನ್ಯಾಸಗಳಲ್ಲಿ ಹೇಳುತ್ತಲೇ ಇದ್ದೇನೆ. ಶ್ರೀಕೃಷ್ಣನೆಂದರೆ ಯಾರಿಗೆ ಪ್ರೀತಿಯಿಲ್ಲ? ನನ್ನ ಸದ್ಗುರು ಗಳಿಗಂತೂ ಶ್ರೀಕೃಷ್ಣ ಎಂದರೆ ಭಗವದ್ಗೀತೆಯೇ, ಭಗವದ್ಗೀತೆಯೆಂದರೆ ಶ್ರೀಕೃಷ್ಣನೇ ಎಂದಾಗಿ, ಶ್ರೀಕೃಷ್ಣನ ಮೇಲೆ ಅಪಾರ ಭಕ್ತಿ ಇತ್ತು.

**ಶ್ರೀ ವಿಳಂಬಿ ಸಂವತ್ಸರದ ಶ್ರಾವಣ ಕೃಷ್ಣ ಅಷ್ಟಮಿ ೩-೯-೨೦೧೮ ಸೋಮವಾರದಂದು ಕೃಷ್ಣಂ ವಂದೇ ಜಗದ್ಗುರುಮ್** ಎಂಬ ವಿಷಯವನ್ನು ಕುರಿತು ನಾಲ್ಕಾರು ಸ್ಥಳಗಳಲ್ಲಿ ಉಪನ್ಯಾಸಗಳನ್ನು ಮಾಡುವ ಅದೃಷ್ಟವು ನನ್ನದಾಗಿತ್ತು. ಆ ಪ್ರವಚನಗಳ ಸಾರವನ್ನೆಲ್ಲ ಸಂಗ್ರಹಿಸಿ ಶ್ರೋತೃಗಳ ಅಪೇಕ್ಷೆಯಂತೆ ಈ ಗ್ರಂಥವನ್ನು ಬರೆದಿರುತ್ತೇನೆ. ಇದನ್ನು ಸದ್ಗುರುಗಳಿಗೇ ಸಮರ್ಪಿಸಿರುತ್ತೇನೆ.

॥ ಗುರುಪ್ರಸಾದಃ ಸಕಲಂ ದದಾತಿ ॥

ಶ್ರೀ ವಿಳಂಬಿ ಸಂವತ್ಸರದ
ಭಾದ್ರಪದ ಬಹುಳ ದ್ವಿತೀಯಾ
27-9-2018, ಗುರುವಾರ

ಕೆ. ಜಿ. ಸುಬ್ರಾಯಶರ್ಮಾ
ಉತ್ತರಹಳ್ಳಿ, ಬೆಂಗಳೂರು-61
2639 6786, 98862 81622

# ಕೃಷ್ಣಂ ವಂದೇ ಜಗದ್ಗುರುಮ್ - ೧೦೨

ವಾಚಕರೇ, ತಮ್ಮ ಹಸ್ತಗಳಲ್ಲಿ ಇದೀಗ ಕಂಗೊಳಿಸುತ್ತಿರುವ ಈ ಗ್ರಂಥಕ್ಕೆ **"ಕೃಷ್ಣಂ ವಂದೇ ಜಗದ್ಗುರುಮ್"** ಎಂದು ಹೆಸರು. **ಜಗದ್ಗುರು** ಎಂಬೀ ಪಟ್ಟಕ್ಕೆ ಅರ್ಹನಾದ ಪ್ರಪ್ರಥಮ ಪುರುಷನೆಂದರೆ **ಶ್ರೀಕೃಷ್ಣನೇ** ಎಂದು ಧೈರ್ಯವಾಗಿ ಹೇಳಬಹುದು. ಜಗತ್ತಿಗೇ ಗುರುವಾದವನು ಮಾತ್ರವೇ **ಜಗದ್ಗುರು**ವಾಗಬಲ್ಲನು. ಶ್ರೀಕೃಷ್ಣಪರಮಾತ್ಮನಿಗೆ ಜಗದ್ಗುರು ಪಟ್ಟವು ಸಮರ್ಥವೂ ಅನ್ವರ್ಥವೂ ಆಗಿರುತ್ತದೆ. ಬಹಳ ಮಟ್ಟಿಗೆ ಶ್ರೀಕೃಷ್ಣನನ್ನು ಎಲ್ಲರೂ ಪೂಜಿಸುತ್ತಾರೆ. ಶ್ರೀಕೃಷ್ಣನ ಉಪದೇಶಾಮೃತ ಭಗವದ್ಗೀತೆಯನ್ನು ನಾವೆಲ್ಲರೂ ಗೌರವಿಸುತ್ತೇವೆ, ಸ್ತುತಿಸುತ್ತೇವೆ, ಪೂಜಿಸುತ್ತೇವೆ ಕೂಡ. **ಹೀಗಾಗಿ ಶ್ರೀಕೃಷ್ಣನು ಅನ್ವರ್ಥವಾಗಿ ಜಗದ್ಗುರುವೇ ಆಗಿರುತ್ತಾನೆ.**

ಈ ಗ್ರಂಥದಲ್ಲಿ ಶ್ರೀಕೃಷ್ಣನ ಜೀವನ, ಸಾಧನ, ಸಂದೇಶಗಳನ್ನು ಸರಳವಾಗಿ ಒಂದೊಂದೇ ಪುಟದಲ್ಲಿ ಬರೆದಿರುತ್ತೇನೆ. ಯಾವ ದೃಷ್ಟಿಕೋನದಿಂದ ನೋಡಿದರೂ ಶ್ರೀಕೃಷ್ಣನು ಪರಿಪೂರ್ಣನಾಗಿಯೇ ತೋರುತ್ತಾನೆ. ಹೀಗಾಗಿ ಶ್ರೀಕೃಷ್ಣನನ್ನು **ಪರಿಪೂರ್ಣಲೀಲಾವತಾರಿ** ಎಂದೇ ನಮ್ಮ ಹಿರಿಯರು ಗೌರವಿಸುತ್ತಾರೆ, ಪೂಜಿಸುತ್ತಾರೆ, ಸ್ತುತಿಸುತ್ತಾರೆ ಕೂಡ.

**ಶ್ರೀಕೃಷ್ಣಜನ್ಮಾಷ್ಟಮಿಯಂದು,** ೩-೯-೨೦೧೮ ಸೋಮವಾರದಂದು ಶ್ರೀಕೃಷ್ಣನನ್ನು ಕುರಿತು ನಾಲ್ಕಾರು ಕಡೆಗಳಲ್ಲಿ ಪ್ರವಚನಗಳನ್ನು ಮಾಡುವ ಸೌಭಾಗ್ಯವು ನನ್ನದಾಗಿತ್ತು. ಶ್ರೋತೃಗಳ ಅಪೇಕ್ಷೆಯಂತೆ **ಕೃಷ್ಣಂ ವಂದೇ ಜಗದ್ಗುರುಂ** ಎಂಬೀ ಹೆಸರಿನಲ್ಲಿ ಆ ಪ್ರವಚನಗಳ ಸಾರವನ್ನು ಬರೆದಿರುತ್ತೇನೆ. ಇದೆಲ್ಲವೂ ನನ್ನ ಸದ್ಗುರುಗಳು ನನಗೆ ನನ್ನ ಗುರುಕುಲವಾಸದ ಆ ಸುವರ್ಣ ಯುಗದಲ್ಲಿ (೧೯೫೯ ರಿಂದ ೧೯೭೫) ಹೇಳುತ್ತಿದ್ದ ವಿಷಯಗಳಾಗಿವೆ.

ಕೃಷ್ಣ ಎಂದ ಕೂಡಲೇ ನಮಗೆ ನೆನಪಾಗುವುದು ಭಗವದ್ಗೀತೆ; ಭಗವದ್ಗೀತೆ ಎಂದ ಕೂಡಲೇ ಕೃಷ್ಣನು ನಮ್ಮ ಕಣ್ಮುಂದೆ ನಿಂತುಬಿಡುತ್ತಾನೆ. ಹೀಗಾಗಿ ಗೀತೆ ಯಿಂದಲೂ ಕೆಲವು ಶ್ಲೋಕಗಳನ್ನು ಆರಿಸಿಕೊಂಡು ಶ್ರೀಕೃಷ್ಣನ ಮಹಿಮೆಗಳನ್ನು ಈ ಗ್ರಂಥದಲ್ಲಿ ಸೇರಿಸಿರುತ್ತೇನೆ. ಇದರಿಂದ ತತ್ತ್ವಜಿಜ್ಞಾಸು ಸಾಧಕರಿಗೆ ಶ್ರೀಕೃಷ್ಣನ ಮಹಿಮೆಯು ಅರ್ಥವಾಗುತ್ತದೆಯೆಂದು ಭಾವಿಸುತ್ತೇನೆ. ಇದನ್ನು ಅಂದವಾಗಿ ಸಂತೋಷದಿಂದ ಹಾಗೂ ಪ್ರೀತಿಯಿಂದ ಮುದ್ರಿಸಿಕೊಟ್ಟಿರುವ ನನ್ನ ಪ್ರೀತಿಯ ಶ್ರೀ ಬಿ. ಎನ್. ನಟರಾಜ್ ರವರಿಗೆ ನನ್ನ ಕೃತಜ್ಞತೆಗಳು.

27-9-2018 **ಲೇಖಕ**

ಗುರುವಾರ **ಕೆ. ಜಿ. ಸುಬ್ರಾಯಶರ್ಮಾ**

# "ಕೃಷ್ಣಂ ವಂದೇ ಜಗದ್ಗುರುಂ" ಗ್ರಂಥದ ಅಂತರಂಗ

# 1. 'ಕೃಷ್ಣ' ಎಂದರೇನರ್ಥ?

ದಶಾವತಾರಗಳಲ್ಲಿ **ಎಂಟನೆಯ ಅವತಾರವೇ ಕೃಷ್ಣಾವತಾರ**. ಗೀತೆಯನ್ನು ಉಪದೇಶಿಸಿದ ಭಗವಂತನೇ ಕೃಷ್ಣ, ಅರ್ಜುನನ ಸಖನೇ ಕೃಷ್ಣ, ಭಾಗವತದಲ್ಲಿನ ದೇವರೆಂದರೆ ಕೃಷ್ಣನೇ. ರಾಧೆಯ ಪತಿಯೆಂದರೆ ಕೃಷ್ಣ. ಹೀಗೆ ಎಲ್ಲಾ ಕಡೆಗಳಲ್ಲಿಯೂ ಕೃಷ್ಣನ ವೈಭವವೇ ಮೆರೆಯುತ್ತಿದೆಯಲ್ಲವೇ? ಹಾಗಾದರೆ **'ಕೃಷ್ಣ'** ಎಂಬ ಶಬ್ದದ ಸ್ವಾರಸ್ಯವೇನು? ಎಂಬುದನ್ನು ನಾವೀಗ ನೋಡೋಣ:

ಕೃಷ್ + ಣ = ಕೃಷ್ಣ ಎಂದಾಗುತ್ತದೆಯಲ್ಲವೇ? ಈ ಎರಡೂ ಅಕ್ಷರಗಳ ಅಂತರಾರ್ಥವನ್ನು ನಾವು ನೋಡೋಣ:

**ಕೃಷಿರ್ಭೂರ್ವಾಚಕಃ ಶಬ್ದಃ 'ಣ'ಶ್ಚ ನಿರ್ವೃತಿವಾಚಕಃ।**
**ತಯೋರೈಕ್ಯಂ ಪರಂ ಬ್ರಹ್ಮ 'ಕೃಷ್ಣ' ಇತ್ಯಭಿಧೀಯತೇ॥**

*'**ಕೃಷ್**' ಎಂಬ ಶಬ್ದವು 'ಭೂ'ವಾಚಕವಾದದ್ದು, 'ಣ' ಎಂದರೆ ಆನಂದ, ನಿರ್ವಾಣ ಎಂದರ್ಥ; ಹೀಗೆ ಕೃಷ್ + ಣ—ಎರಡೂ ಸೇರಿಕೊಂಡು ಸಚ್ಚಿದಾನಂದ ಸ್ವರೂಪನಾದ ಭಗವಂತನನ್ನೇ '**ಕೃಷ್ಣ**' ಎನ್ನುತ್ತಾರೆ.*

**'ಕೃಷ್'** ಎಂದರೆ **ಕೃಷಿ**; ಕೃಷಿ ಎಂದರೆ 'ಭೂಮಿ' ಎಂದರ್ಥ; 'ಭೂಮಿ' ಎಂಬಲ್ಲಿ **'ಭೂ'** ಎಂದರೆ ಭೂ-ಸತ್ತಾಯಾಂ ಎಂಬ ಧಾತು ಎಂದರ್ಥ. ಹೀಗಾಗಿ **ಭೂ** ಎಂದರೆ ಇರುವಿಕೆ ಎಂದರ್ಥ. **ಭೂ** ಎಂದರೆ **ಸತ್**ಸ್ವರೂಪ ಎಂದರ್ಥ. ಸತ್ ಎಂದರೆ ಇರುವಿಕೆಯ ಸ್ವರೂಪನಾದ ಸದ್ರೂಪನಾದ ಪರಮಾತ್ಮ ಎಂದರ್ಥ. ಇದನ್ನೇ ಛಾಂದೋಗ್ಯೋಪನಿಷತ್ತಿನಲ್ಲಿ **"ಸದೇವ ಸೋಮ್ಯ ಇದಮಗ್ರ ಆಸೀತ್"** ಎಂದಿದೆ.

ಇನ್ನು, **'ಣ'** ಎಂದರೆ **ನಿರ್ವಾಣ** ಎಂದರ್ಥ; **'ನಿರ್ವಾಣ'** ಎಂಬ ಶಬ್ದದಲ್ಲಿರುವ ಕೊನೆಯ ಅಕ್ಷರವನ್ನು ಇಲ್ಲಿ ತೆಗೆದುಕೊಂಡಿದೆ. ನಿರ್ವಾಣ ಎಂದರೆ ಸುಖ, ಶಾಂತಿ, ತೃಪ್ತಿ, ಆನಂದ ಎಂದೆಲ್ಲಾ ಅರ್ಥವಾಗುತ್ತದೆ. ಹೀಗೆ **'ಕೃಷ್'** ಎಂದರೆ **ಸತ್**ಸ್ವರೂಪನೆಂದೂ **'ಣ'** ಎಂದರೆ ಆನಂದಸ್ವರೂಪನೆಂದೂ ಅರ್ಥ ಮಾಡಿಕೊಳ್ಳಬೇಕು. ಸತ್, ಆನಂದ—ಇವೆರಡರ ಮಧ್ಯೆ **ಚಿತ್** ಅನ್ನೂ ಸೇರಿಸಿಕೊಂಡಾಗ **ಸಚ್ಚಿದಾನಂದಂ ಬ್ರಹ್ಮ** ಎಂದು ಆಗುತ್ತದೆ. ಹೀಗಾಗಿ **ಕೃಷ್ಣ** ಎಂದರೆ **ಸತ್ಯಂ ಜ್ಞಾನಮನಂತಂ ಬ್ರಹ್ಮ** ಎಂಬ ಲಕ್ಷಣವನ್ನುಳ್ಳ ಪರಬ್ರಹ್ಮ ಎಂದರ್ಥ.

**ಕರ್ಷಯತಿ ಇತಿ ಕೃಷ್ಣಃ**, ತನ್ನ ಕಡೆಗೆ ಭಕ್ತರನ್ನು ಸೆಳೆಯುವುದರಿಂದಲೂ ಇವನಿಗೆ **ಕೃಷ್ಣ** ಎಂದು ಹೆಸರಾಗಿದೆ. ಕೃಷ್ಣನು ತನ್ನ ನಡತೆ, ಉಪದೇಶಗಳಿಂದ ಎಲ್ಲರನ್ನೂ ಆಕರ್ಷಿಸುತ್ತಾನಲ್ಲವೇ?

**ಕೃಷ್ಣನನ್ನು ಸಚ್ಚಿದಾನಂದಸ್ವರೂಪನೆಂದೇ ಉಪಾಸನೆಮಾಡಬೇಕು**

## 2. 'ಅವತಾರ' ಎಂದರೇನು?

ಭಗವಂತನು ಹುಟ್ಟಿದರೆ, ಮಹಾತ್ಮರು ಜನಿಸಿದರೆ, ಮಹರ್ಷಿಗಳು ಹುಟ್ಟಿದರೆ ಅದನ್ನು **'ಅವತಾರ'** ಎನ್ನುತ್ತಾರೆ. ಉದಾಹರಣೆಗೆ ಶ್ರೀಕೃಷ್ಣನ ಅವತಾರ, ಶ್ರೀರಾಮನ ಅವತಾರ, ಶ್ರೀರಾಮಕೃಷ್ಣ ಪರಮಹಂಸರ ಅವತಾರ, ವಸಿಷ್ಠ ಮಹರ್ಷಿಗಳ ಅವತಾರ—ಹೀಗೆ ಲೋಕದಲ್ಲಿ ಕರೆಯುತ್ತಾರೆ. ಆದರೆ ದುಷ್ಟರಾದ ರಾಕ್ಷಸರು ಹುಟ್ಟಿದ್ದನ್ನು 'ಅವತಾರ' ಎಂದು ಕರೆಯುವುದಿಲ್ಲ. ರಾವಣಾವತಾರ, ಕಂಸಾವತಾರ ಎಂದು ಯಾರೂ ಕರೆಯುವುದಿಲ್ಲ.

ಸರಿ, ಹಾಗಾದರೆ 'ಅವತಾರ' ಎಂದರೇನು? ಎಂಬುದನ್ನು ನೋಡೋಣ:

ಸಾಕ್ಷಾತ್ ಪರಮೇಶ್ವರನು ಅಂದರೆ ಮಹಾವಿಷ್ಣುವಾಗಿರಬಹುದು, ಅಥವಾ ಪರಮಶಿವನೇ ಆಗಿರಬಹುದು; ಅವನು ಲೋಕಕಲ್ಯಾಣವನ್ನು ಮಾಡುವುದಕ್ಕಾಗಿ ತನ್ನ ನಿಜಸ್ವರೂಪದಿಂದ ಉದ್ದೇಶಪೂರ್ವಕವಾಗಿ ಕೆಳಕ್ಕೆ ಇಳಿಯುವುದನ್ನು ಶಾಸ್ತ್ರಗಳಲ್ಲಿ ಅವತಾರ ಎನ್ನುತ್ತಾರೆ. **ಅವ** = ಕೆಳಕ್ಕೆ, **ತಾರ** = ಇಳಿಯುವುದು. ಭಗವಂತನು ಇಂಥ ನೂರಾರು, ಸಹಸ್ರಾರು ಅವತಾರಗಳನ್ನು ಮಾಡಿರುತ್ತಾನೆ. ಈ ಎಲ್ಲಾ ಅವತಾರಗಳಲ್ಲಿಯೂ ಧರ್ಮಸ್ಥಾಪನೆ, ದುಷ್ಟಸಂಹಾರ, ಅಧರ್ಮ ನಾಶವೇ ಮುಖ್ಯ ಉದ್ದೇಶವಾಗಿರುತ್ತದೆ.

'ಅವತಾರ'ದಲ್ಲಿ ಸ್ವಾತಂತ್ರ್ಯವಿದೆ, ಅವತಾರಕ್ಕೆ ಲೋಕಕಲ್ಯಾಣವೆಂಬ ಗುರಿಯೂ ಇದೆ; ಭಗವಂತನ ಅವತಾರಗಳಲ್ಲಿ ರಾಗದ್ವೇಷಾದಿದೋಷ ಗಳಿರುವುದಿಲ್ಲ, ಅವತಾರಗಳಲ್ಲಿ ಅಹಂಕಾರ, ಮಮಕಾರಗಳಿರುವುದಿಲ್ಲ. ಅವತಾರಗಳೆಲ್ಲವೂ ಧರ್ಮಸಂಸ್ಥಾಪನೆಗಾಗಿಯೇ ನಡೆಯುತ್ತವೆ. ಅವತಾರ ಗಳಿಂದ ಭಗವಂತನ ನಿಜಸ್ವರೂಪಕ್ಕೆ ಚ್ಯುತಿಯು ಬರುವುದಿಲ್ಲ.

ಭಗವಂತನ ಯಾವುದೇ ಅವತಾರವಾದರೂ, ಅದರಲ್ಲಿ ಭಗವಂತನ ಸರ್ವಜ್ಞತ್ವ, ಸರ್ವಶಕ್ತಿತ್ವ, ಸರ್ವಾತ್ಮತ್ವ, ಸರ್ವವ್ಯಾಪಿತ್ವ, ಅಸಂಗತ್ವ, ಚೈತನ್ಯಾತ್ಮಕತ್ವಾದಿ ಅಸಾಧಾರಣ ಧರ್ಮಗಳಿರುತ್ತವೆ. ಏಕೆಂದರೆ ಇವೆಲ್ಲವೂ ಭಗವಂತನ ಅವತಾರಗಳು. ಈ ಅವತಾರಗಳ ಮೂಲಕ ಹೇಗೋ ಜಗತ್ಕಲ್ಯಾಣ ವಾಗಿರುತ್ತದೆ. ಇದು ಸಾಮಾನ್ಯರಿಗೆ ಅರ್ಥವಾಗುವುದಿಲ್ಲ. ಆದರೆ ಮಹಾತ್ಮರಿಗೆ ಭಗವಂತನ ಅವತಾರಗಳ ರಹಸ್ಯಾರ್ಥಗಳು ತಿಳಿಯುತ್ತವೆ. ಏಕೆಂದರೆ ಈ ಮಹಾತ್ಮರೂ ಕೂಡ ಭಗವಂತನ ಅವತಾರಗಳೇ ಆಗಿರುವುದರಿಂದ. ಭಗವಂತನ ಅವತಾರಿಗಳೇ ಆದ ಮಹಾತ್ಮರಿಗೆ ಮಾತ್ರವೇ ಭಗವಂತನ ಅವತಾರಗಳ ಅರ್ಥವು ತಿಳಿಯುತ್ತದೆಯೇ ಹೊರತು ಸಾಮಾನ್ಯ ಸಂಸಾರಿಗಳಿಗಲ್ಲ. ನಾವುಗಳು ಆ ಮಹಾತ್ಮರಿಂದಲೇ ಈ ರಹಸ್ಯಾರ್ಥವನ್ನು ತಿಳಿದುಕೊಳ್ಳಬೇಕು.

**ಅವತಾರದ ರಹಸ್ಯಾರ್ಥವನ್ನು ತಿಳಿದು ಪೂಜಿಸಬೇಕು**

# 3. ದೇವಕೀಪರಮಾನಂದಮ್

ಲೀಲಾವತಾರಿಯಾಗಿದ್ದರೂ ಶ್ರೀಕೃಷ್ಣನು ಮಾತೃಭಕ್ತನೂ, ಮಾತೃ ಪ್ರೇಮಿಯೂ, ಮಾತೃ ಆರಾಧಕನೂ ಆಗಿರುತ್ತಾನೆ. ಕಂಸನು ತನ್ನ ತಂಗಿಯಾದ ದೇವಕೀದೇವಿಯನ್ನೂ ಮತ್ತು ವಸುದೇವನನ್ನೂ ಕಾರಾಗೃಹದಲ್ಲಿ ಬಂಧಿಸಿ ಇರಿಸಿದ್ದನು. ಇದರಿಂದ ವಸುದೇವದೇವಕಿಯರ ಮನಸ್ಸು ದುಃಖಸಾಗರ ದಲ್ಲಿಯೇ ಮುಳುಗಿತ್ತು. ಗರ್ಭವತಿಯಾಗಿದ್ದರೂ ದೇವಕಿಗೆ ಕಂಸನ ಭಯದಿಂದ ಯಾವಾಗಲೂ ದುಃಖವೇ ಕಾಡುತ್ತಿತ್ತು.

ಕಾರಾಗೃಹದಲ್ಲಿಯೇ ದೇವಕಿಯು ಗರ್ಭವತಿಯಾಗಿದ್ದಾಳೆ. ಆದರೂ ಅವಳಿಗೆ ಭಯವು ಮಾತ್ರ ಹೋಗಿಯೇ ಇಲ್ಲ. ನಡುರಾತ್ರಿ ಸಮಯದಲ್ಲಿ ದೇವಕಿಯು ಗಂಡುಮಗುವನ್ನು ಪ್ರಸವಿಸಿದ್ದಾಳೆ. ಸುಂದರನಾದ ಮಗನ, ಹಸನ್ಮುಖಿಯಾದ ಪುತ್ರನ ಮುಖಾರವಿಂದ ನೋಡಿದಾಗಲೂ ದೇವಕಿಗೆ ತನ್ನ ಅಣ್ಣ ಕಂಸನ ಭಯದಿಂದ ಸಂತೋಷವಾಗುತ್ತಿಲ್ಲ. ಯಾವ ಕ್ಷಣದಲ್ಲಿ ಬಂದು ಕಂಸನು ಈ ತನ್ನ ಪುತ್ರನನ್ನು ಕೊಂದುಹಾಕಿಬಿಡುತ್ತಾನೋ ಎಂಬ ಕಳವಳವು ದೇವಕಿಯನ್ನು ಯಾವಾಗಲೂ ಕಾಡುತ್ತಿದೆ.

ಆದರೆ ವಿಧಿವಿಲಾಸವೇ ಬೇರೆ! ಸರ್ವಾಂತರ್ಯಾಮಿಯೂ ಸರ್ವಜ್ಞನೂ ಆದ ಶ್ರೀಕೃಷ್ಣನಿಗೆ ಈ ಸಮಾಚಾರಗಳೆಲ್ಲವೂ ಮೊದಲೇ ತಿಳಿದಿತ್ತು. ತನ್ನ ಅಮ್ಮನಿಗೆ ಮನದೊಳಗಿರುವ ದುಃಖದ ದುಗುಡವೂ ಕೃಷ್ಣನಿಗೆ ತಿಳಿದೇ ಇತ್ತು. ಅಮ್ಮನ ಈ ದುಃಖವನ್ನು ದೂರಮಾಡುವುದಕ್ಕಾಗಿ ಆಗತಾನೇ ಹುಟ್ಟಿದ ಕೃಷ್ಣನು ಅಮ್ಮನಿಗೆ ತನ್ನ ವಿಶ್ವರೂಪವನ್ನು ತೋರಿಸಿದನಂತೆ. ಚತುರ್ಭುಜಧಾರಿಯಾಗಿ, ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿಕೊಂಡು ಮಹಾವಿಷ್ಣು ರೂಪದಿಂದಲೂ ಕೃಷ್ಣನು ತನ್ನ ಅಮ್ಮನಿಗೆ ತೋರಿಕೊಂಡನಂತೆ.

ಇದನ್ನು ನೋಡಿದಾಗಲೂ ದೇವಕಿಗೆ ಪೂರ್ಣಸಮಾಧಾನವಾಗಲಿಲ್ಲ. ಆಗ ಕೃಷ್ಣನು "ಅಮ್ಮಾ, ದುಃಖಿಸಬೇಡ, ನಾನು ಮನುಷ್ಯನಲ್ಲಮ್ಮಾ, ನಾನು ಮಹಾವಿಷ್ಣುವೇ ಆಗಿದ್ದೇನೆ; ನನ್ನನ್ನು ಸಂಹರಿಸಲು ಕಂಸನಿಗಾಗಲೀ ಇತರ ಯಾರಿಗೇ ಆಗಲೀ ಸಾಧ್ಯವಿಲ್ಲ ; ನನ್ನನ್ನು ಈ ಕೂಡಲೇ ನಂದನ ಗೋಕುಲಕ್ಕೆ ಕರೆದುಕೊಂಡು ಹೋಗಿ, ಅಲ್ಲಿಂದ ಆ ಹೆಣ್ಣು ಮಗುವನ್ನು ಇಲ್ಲಿಗೆ ತಂದುಬಿಡಲಿ; ಇದರಿಂದ ಯಾವ ಸಮಸ್ಯೆಯೂ ಉಂಟಾಗುವುದಿಲ್ಲ" ಎಂದು ಹೇಳಿದ ಕೂಡಲೇ ದೇವಕಿಗೆ ಪರಮಾನಂದವಾಯಿತಂತೆ. ಹೀಗಾಗಿ ಶ್ರೀಕೃಷ್ಣನಿಗೆ **ದೇವಕೀಪರಮಾನಂದಂ** ಎಂಬ ಹೆಸರು ಸಾರ್ಥಕವಾಗಿದೆ.

**ಶ್ರೀಕೃಷ್ಣನಂತೆ ನಾವುಗಳೂ ಮಾತೃಭಕ್ತರಾಗಬೇಕು**

# 4. ಶ್ರೀರಾಮನೂ ಶ್ರೀಕೃಷ್ಣನೂ

ಶ್ರೀರಾಮಚಂದ್ರ ಹಾಗೂ ಶ್ರೀಕೃಷ್ಣ—ಇಬ್ಬರೂ ಭಗವಂತನ ಅವತಾರವೇ ಹೌದು. ಶ್ರೀರಾಮಚಂದ್ರನು ತ್ರೇತಾಯುಗದಲ್ಲಿ ಅವತರಿಸಿ ಸತ್ಯ ಧರ್ಮ ನ್ಯಾಯಗಳನ್ನು ಜಗತ್ತಿನಲ್ಲಿ ಪ್ರತಿಷ್ಠೆಮಾಡಿದ ಏಳನೆಯ ಅವತಾರವಾದರೆ, ಶ್ರೀಕೃಷ್ಣನು ದ್ವಾಪರಕಲಿಯುಗಗಳ ಸಂಧಿಕಾಲದಲ್ಲಿ ಅವತರಿಸಿ ಆತ್ಮಜ್ಞಾನವನ್ನು ಜಗತ್ತಿಗೆ ಬೋಧಿಸಿದ ಎಂಟನೆಯ ಅವತಾರವಾಗಿರುತ್ತಾನೆ. ಇವರಿಬ್ಬರೂ ಪೂರ್ಣಾವತಾರಿಗಳೇ ಆದರೂ ಇವರಿಬ್ಬರಿಗೂ ತುಂಬಾ ಭೇದವಿರುತ್ತದೆ. ಅದೇನು? ಎಂಬುದನ್ನು ಸಂಕ್ಷೇಪವಾಗಿ ನೋಡೋಣ:

ಶ್ರೀರಾಮಚಂದ್ರನು ತನ್ನನ್ನು ದೇವರೆಂದಾಗಲೀ ಭಗವಂತನ ಅವತಾರಿಯೆಂದಾಗಲೀ ಎಲ್ಲಿಯೂ ಹೇಳಿಕೊಳ್ಳಲಿಲ್ಲ. ಶ್ರೀರಾಮಚಂದ್ರನು ತನ್ನನ್ನು **ಆತ್ಮಾನಂ ಮಾನುಷಂ ಮನ್ಯೇ ರಾಮಂ ದಶರಥಾತ್ಮಜಮ್।** ನಾನು, 'ದಶರಥನ ಮಗನಾದ ರಾಮ' ಎಂದು ನನ್ನನ್ನು ತಿಳಿದಿದ್ದೇನೆ ಎಂದು ಹೇಳಿಕೊಂಡಿದ್ದಾನೆ. ಇದು ಶ್ರೀರಾಮಾವತಾರದ ರಹಸ್ಯ.

ಆದರೆ ಶ್ರೀಕೃಷ್ಣನು ತನ್ನನ್ನು

**ಅಜೋಽಪಿ ಸನ್ ಅವ್ಯಯಾತ್ಮಾ ಭೂತಾನಾಮ್ ಈಶ್ವರೋಽಪಿ ಸನ್।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ॥** ಭಗವದ್ಗೀತಾ ೪-೬

*ನಾನು ಅಜನೂ ಅವ್ಯಯಾತ್ಮನೂ ಆಗಿದ್ದರೂ, ಸಕಲಭೂತಗಳಿಗೂ ಈಶ್ವರನಾಗಿದ್ದರೂ, ನನ್ನ ಅಧೀನವಾಗಿರುವ ಪ್ರಕೃತಿಯನ್ನು ವಶಮಾಡಿಕೊಂಡು ನಾನು ಹುಟ್ಟಿದವನಂತೆ ತೋರುತ್ತಿದ್ದೇನೆ* ಎಂದು ಬಾಯಿಬಿಟ್ಟು ಹೇಳಿಕೊಂಡಿರುತ್ತಾನೆ.

ಇದನ್ನು ನೋಡಿದರೆ ಶ್ರೀಕೃಷ್ಣನು ಜನ್ಮಮರಣರಹಿತನಾದ ಪರಮಾತ್ಮನೇ ಎಂದು ನಮಗೆ ಸ್ಪಷ್ಟವಾಗಿ ತಿಳಿಯುತ್ತದೆಯಲ್ಲವೇ?

ಆದ್ದರಿಂದಲೇ ನಾವುಗಳು ಶ್ರೀರಾಮನನ್ನು ಆದರ್ಶಪುರುಷ, ಮರ್ಯಾದಾ ಪುರುಷೋತ್ತಮನೆಂದೂ, ಶ್ರೀಕೃಷ್ಣನನ್ನು ಭಗವಂತ ಎಂದೂ ಕರೆಯುತ್ತೇವೆ. ಶ್ರೀರಾಮಚಂದ್ರನು ಸತ್ಯಸಂಧನಾಗಿ, ಧರ್ಮನಿಷ್ಠನಾಗಿ ನ್ಯಾಯಪುರುಷನಾಗಿ ಆದರ್ಶಮನುಷ್ಯನಾಗಿ ತನ್ನ ಜೀವನವನ್ನು ಸಾಗಿಸಿದನು; ಆದರೆ ಶ್ರೀಕೃಷ್ಣ ಪರಮಾತ್ಮನು ತನ್ನ ಲೀಲೆಗಳನ್ನು ತೋರಿಸುತ್ತಾ, ಆತ್ಮಜ್ಞಾನಿಯಾಗಿ, ಪರಬ್ರಹ್ಮ ಸ್ವರೂಪನಾಗಿದ್ದುಕೊಂಡು ಎಲ್ಲರಿಗೂ ಆತ್ಮಜ್ಞಾನವನ್ನೇ ಬೋಧಿಸುತ್ತಾ ಜಗದ್ಗುರುವಾಗಿ ಮೆರೆದಿದ್ದಾನಲ್ಲವೇ? ಆದ್ದರಿಂದಲೇ **"ಕೃಷ್ಣಂ ವಂದೇ ಜಗದ್ಗುರುಮ್"** ಎಂಬೀ ವಾಕ್ಯವು ಶ್ರೀಕೃಷ್ಣನಿಗೆ ಸಂಪೂರ್ಣವಾಗಿ ಸಾರ್ಥಕವಾಗಿರುತ್ತದೆ.

**ಶ್ರೀಕೃಷ್ಣಭಗವಂತನನ್ನು ವೇದಾಂತಸದ್ಗುರು ಎಂದು ಪೂಜಿಸಬೇಕು**

# 5. ಶ್ರೀಕೃಷ್ಣಾವತಾರ

ಮಹಾವಿಷ್ಣುವು ಸ್ವತಃ ಅಜನೂ ಅಜರನೂ ಅಮೃತನೂ ಕೂಟಸ್ಥನೂ ಆಗಿದ್ದರೂ, ಲೋಕಕಲ್ಯಾಣಕ್ಕಾಗಿ ನಾನಾ ನಾಮರೂಪಗುಣಧರ್ಮಗಳಿಂದ ತೋರಿಕೊಳ್ಳುತ್ತಾನೆ. ಇದಕ್ಕೇ **ಅವತಾರ** ಎಂದು ಹೆಸರು. ನಿರ್ಗುಣಸ್ವರೂಪದಿಂದ ಸಗುಣನಾಗಿಯೂ, ಅಜಸ್ವರೂಪದಿಂದ ಜನ್ಮವುಳ್ಳವನಾಗಿರುವಂತೆಯೂ, ನಾಮ ರೂಪರಹಿತನಾಗಿದ್ದರೂ ನಾಮರೂಪಗಳನ್ನುಳ್ಳವನಂತೆಯೂ ಭಗವಂತನು ತೋರಿಕೊಳ್ಳುವುದಕ್ಕೇ **ಅವತಾರ** ಎಂದು ಹೆಸರು. ಈ ಜಗತ್ತೆಲ್ಲವೂ ಭಗವಂತನ ಅವತಾರಗಳೇ ಆದರೂ ಮುಖ್ಯವಾಗಿ ಭಗವಂತನಿಗೆ **ದಶಾವತಾರಗಳು** ಎಂದು ಪುರಾಣಗಳಲ್ಲಿ ಹೇಳಿರುತ್ತದೆ.

ಪ್ರಕೃತ ಶ್ರೀಕೃಷ್ಣಾವತಾರ. **ಶ್ರಾವಣಮಾಸದ ಕೃಷ್ಣಪಕ್ಷದ ಅಷ್ಟಮೀ ತಿಥಿಯಲ್ಲಿ ರೋಹಿಣೀ ನಕ್ಷತ್ರದಲ್ಲಿ ಶ್ರೀಕೃಷ್ಣನ ಅವತಾರವಾಯಿತು**. ಮಧ್ಯ ರಾತ್ರಿಯಲ್ಲಿ, ಅದೂ ಬಂದೀಖಾನೆಯಲ್ಲಿ ಶ್ರೀಕೃಷ್ಣನು ಹುಟ್ಟಿದನು ಎಂದು ನಮಗೆ ಭಾಗವತಾದಿ ಪುರಾಣಗಳಿಂದ ತಿಳಿಯುತ್ತದೆ. ಇವನಿಗೆ ಕೃಷ್ಣ ಎಂದೇ ಹೆಸರು. ಏಕೆಂದರೆ ಬಣ್ಣದಲ್ಲಿ ಸ್ವಲ್ಪ ಕಪ್ಪು. ಕೃಷ್ಣಪಕ್ಷದಲ್ಲಿ ಹುಟ್ಟಿದ್ದರಿಂದಲೂ ಇವನು ಕೃಷ್ಣ.

ಭಗವಂತನ ದಶಾವತಾರಗಳಲ್ಲಿ ಶ್ರೀಕೃಷ್ಣಾವತಾರವು ಎಂಟನೆಯದು. **ಶ್ರೀಕೃಷ್ಣನು ಪೂರ್ಣಾವತಾರಿ**; ಎಂದರೆ, ಬಾಲ್ಯದಿಂದ ಹಿಡಿದು ವಾರ್ಧಕ್ಯದ ವರೆಗೂ ಶ್ರೀಕೃಷ್ಣನು ತನ್ನ ಲೀಲೆಗಳನ್ನು ಜಗತ್ತಿಗೆ ತೋರಿಸಿದ್ದಾನೆ. ಹೀಗಾಗಿ ಶ್ರೀಕೃಷ್ಣನಿಗೆ **ಲೀಲಾವತಾರೀ** ಎಂದೇ ಹೆಸರು. ಶ್ರೀಕೃಷ್ಣನ ಜೀವನದಲ್ಲಿ ಪ್ರತಿ ಯೊಂದು ಕ್ಷಣವೂ ಲೀಲೆಗಳೇ. ಹುಟ್ಟಿದಾಗಿನಿಂದ ದೇಹತ್ಯಾಗವಾಗುವವರೆಗೂ ಶ್ರೀಕೃಷ್ಣನು ಅನೇಕ ಲೀಲೆಗಳನ್ನು ತೋರಿಸಿದ್ದಾನೆ. ಶ್ರೀಕೃಷ್ಣನನ್ನು ಬಾಲಕೃಷ್ಣ ಎಂದೇ ಕರೆದು, ಕೃಷ್ಣಜನ್ಮಾಷ್ಟಮಿಯಂದು ಶಾಲೆಗಳಲ್ಲಿ ಚಿಕ್ಕಚಿಕ್ಕ ಮಕ್ಕಳಿಗೆಲ್ಲ ಕೃಷ್ಣನಂತೆ ಅಲಂಕಾರವನ್ನು ಮಾಡುತ್ತಾರೆ. ಇವನೇ ಮುದ್ದುಕೃಷ್ಣನೂ ಹೌದು. ಅಧರ್ಮವನ್ನು ನಾಶಮಾಡಿ, ದುಷ್ಟರನ್ನು ಶಿಕ್ಷಿಸಿ, ಧರ್ಮಸ್ಥಾಪನೆಮಾಡಿ, ಶಿಷ್ಟ ರಕ್ಷಣೆಗಾಗಿಯೇ ಭಗವನ್ನಾರಾಯಣನು ಶ್ರೀಕೃಷ್ಣನಾಗಿ ಅವತರಿಸಿರುತ್ತಾನೆ.

ಶ್ರೀಕೃಷ್ಣಪರಮಾತ್ಮನು ಲೀಲಾವತಾರಿಯಾಗಿ ಎಲ್ಲಾ ಪಾತ್ರಗಳನ್ನೂ ಅಚ್ಚುಕಟ್ಟಾಗಿ ಹಾಗೂ ಸುಂದರವಾಗಿ ನಿರ್ವಹಿಸಿದ್ದಾನೆ. ಮುದ್ದುಮಗನಾಗಿ, ಯೋಗ್ಯ ಬಾಲಕನಾಗಿ, ಶ್ರೇಷ್ಠ ವಿದ್ಯಾರ್ಥಿಯಾಗಿ, ಆದರ್ಶ ಗೃಹಸ್ಥನಾಗಿ, ಉತ್ತಮ ರಾಯಭಾರಿಯಾಗಿ, ಅತ್ಯಂತ ಶ್ರೇಷ್ಠ ಗೀತಾಚಾರ್ಯನಾಗಿ, ಅರ್ಜುನ ಸಾರಥಿಯಾಗಿ, ಜಗದ್ಗುರುವೂ ಆಗಿ ತನ್ನ ಲೀಲೆಗಳನ್ನು ತೋರಿದ್ದಾನೆ.

**ಮಕ್ಕಳಿಗೆಲ್ಲ ಆನಂದವನ್ನು ಉಂಟುಮಾಡುವ ಶ್ರೀಕೃಷ್ಣನನ್ನು ಪೂಜಿಸಬೇಕು**

# 6. ಸಂಭವಾಮ್ಯಾತ್ಮಮಾಯಯಾ

ತಾನು ಯಾರೆಂಬುದನ್ನು ಶ್ರೀಕೃಷ್ಣನೇ ಈ ಕೆಳಗಿನ ಶ್ಲೋಕದಲ್ಲಿ ಹೇಳಿದ್ದಾನೆ:

**ಅಜೋऽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋऽಪಿ ಸನ್ ।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥** ೪-೬

*ಅರ್ಜುನನೇ, ನಾನು ಜನ್ಮರಹಿತನಾಗಿದ್ದರೂ, ನಾಶವಿಲ್ಲದವನಾಗಿದ್ದರೂ, ಭೂತಗಳಿಗೆಲ್ಲ ಈಶ್ವರನಾಗಿದ್ದರೂ ನನ್ನ ಅಧೀನವಾದ ಮಾಯೆಯಿಂದ, ನನ್ನ ಅಧೀನವಾದ ಪ್ರಕೃತಿಯನ್ನು ಇಟ್ಟುಕೊಂಡು ಹುಟ್ಟುತ್ತೇನೆ.*

ಎಷ್ಟು ಅರ್ಥಗರ್ಭಿತ ಶ್ಲೋಕವಿದು! ಶ್ರೀಕೃಷ್ಣನ ಜನ್ಮದ ರಹಸ್ಯವನ್ನು ಶ್ರೀಕೃಷ್ಣನೇ ಸುಸ್ಪಷ್ಟವಾಗಿ ಇಲ್ಲಿ ಬಾಯಿಬಿಟ್ಟು ಹೇಳಿದ್ದಾನೆ:

**ಅಜೋऽಪಿ ಸನ್:** ಅಜನೇ ಆಗಿದ್ದರೂ; ಪರಮಾತ್ಮನೆಂದರೆ ಜನ್ಮವಿಲ್ಲದ ವಿಕಾರಗಳಿಲ್ಲದ, ನಾಶವೂ ಇಲ್ಲದ ಪರಿಪೂರ್ಣತತ್ತ್ವ. ಶ್ರೀಕೃಷ್ಣನು ನಿಜವಾಗಿ ಈ ಪರಬ್ರಹ್ಮಸ್ವರೂಪನೇ ಆಗಿರುತ್ತಾನೆ.

**ಅವ್ಯಯಾತ್ಮಾ ಅಪಿ ಸನ್:** ನಾಶವಿಲ್ಲದ ಸ್ವರೂಪನೇ ಆಗಿದ್ದರೂ; ದೇಶಕಾಲಗಳನ್ನೇ ಮೀರಿರುವ ಪರಮಾತ್ಮನಿಗೆ ನಾಶವೆಂಬುದು ಇಲ್ಲವಷ್ಟೇ?

**ಭೂತಾನಾಮ್ ಈಶ್ವರೋऽಪಿ ಸನ್:** ಸಕಲ ಪ್ರಾಣಿಗಳಿಗೂ ಈಶನಾಗಿದ್ದರೂ; ಇಡೀ ಸ್ಥಾವರಜಂಗಮಜಗತ್ತಿಗೆ ಕಾರಣನಾಗಿರುವ ಪರಮಾತ್ಮನು ಸಕಲ ಭೂತಗಳಿಗೂ ಒಡೆಯನೂ ಆಗಿರುತ್ತಾನಲ್ಲವೇ? ಹೀಗಾಗಿ ಪರಬ್ರಹ್ಮಸ್ವರೂಪನೇ ಆಗಿರುವ ಶ್ರೀಕೃಷ್ಣನಿಗೆ ಜನ್ಮವೂ ಇಲ್ಲ, ವಿಕಾರಗಳೂ ಇಲ್ಲ, ಮರಣವೂ ಇಲ್ಲ; ಇವನು ನಿತ್ಯನಿರ್ವಿಕಾರಸ್ವರೂಪನೇ ಆಗಿದ್ದರೂ ಮಾಯೆಯಿಂದ ಹುಟ್ಟಿದವನಂತೆ ತೋರುತ್ತಿದ್ದಾನೆ.

**ಪ್ರಕೃತಿಂ ಸ್ವಾಮಧಿಷ್ಠಾಯ:** ನನ್ನ ಅಧೀನವಾಗಿರುವ, ನನ್ನದೇ ಆಗಿರುವ ಪ್ರಕೃತಿಯನ್ನು ಮುಂದುಮಾಡಿಕೊಂಡು

**ಆತ್ಮಮಾಯಯಾ ಸಂಭವಾಮಿ:** ನನ್ನ ಮಾಯಾಶಕ್ತಿಯಿಂದ ನಾನು ಸಂಭವಿಸುತ್ತೇನೆ, ಹುಟ್ಟುತ್ತೇನೆ ಎಂದು ಶ್ರೀಕೃಷ್ಣನೇ ಹೇಳಿದ್ದಾನೆ. **ಸಂಭವಾಮಿ ಸಂಭವಾಮೀವ**; ಹುಟ್ಟುತ್ತೇನೆ ಎಂದರೆ ಹುಟ್ಟುವವನಂತೆ ಹುಟ್ಟಿದವನಂತೆ ತೋರುತ್ತೇನೆ ಎಂದು ಶ್ರೀಶಾಂಕರಭಾಷ್ಯ.

**ಶ್ರೀಕೃಷ್ಣನನ್ನು ಜನ್ಮರಹಿತಪರಬ್ರಹ್ಮವೆಂದೇ ತಿಳಿಯಬೇಕು**

# 7. ಜನ್ಮಗಳೂ ಅವತಾರಗಳೂ

ಸಾಮಾನ್ಯ ಮಾನವರು ಹುಟ್ಟಿದರೆ ಅದನ್ನು ಜನ್ಮ, ಜನನ, ಹುಟ್ಟುವಿಕೆ ಎಂದೂ; ಭಗವಂತನು ಹುಟ್ಟಿದರೆ ಅದನ್ನು **ಅವತಾರ** ಎಂದೂ ನಾವುಗಳು ಕರೆಯುತ್ತೇವಲ್ಲವೇ? ಒಂದು ದಿನಕ್ಕೆ ಇಡೀ ವಿಶ್ವದಲ್ಲಿ ಸಹಸ್ರಾರು ಮಕ್ಕಳುಗಳು ಹುಟ್ಟುತ್ತಾರೆ. ಇದಕ್ಕೆ ಮಕ್ಕಳುಗಳ ಜನನಗಳು ಅಥವಾ ಹುಟ್ಟುವಿಕೆ ಎಂದು ಹೆಸರು. ಆದರೆ ಒಂದು ದಶಕದಲ್ಲಿ ಒಬ್ಬರಂತೆ, ಒಂದು ಶತಮಾನದಲ್ಲಿ ಒಬ್ಬರಂತೆ, ಅಥವಾ ಒಂದು ಯುಗದಲ್ಲಿ ಒಬ್ಬರಂತೆ ಹುಟ್ಟಿದರೆ ಅವರನ್ನು **ಅವತಾರ** ಎನ್ನುತ್ತೇವೆ, ಅಲ್ಲವೇ?

ಹಾಗಾದರೆ ಜನ್ಮಕ್ಕೂ ಅವತಾರಕ್ಕೂ ಏನು ವ್ಯತ್ಯಾಸ? ಏನು ವಿಶೇಷ? ಎಂಬುದನ್ನು ನೋಡೋಣ: ಹಿಂದಿನ ಕರ್ಮಗಳಿಗೆ ಅಧೀನರಾಗಿ, ತಮಗೆ ಸ್ವಾತಂತ್ರ್ಯವಿಲ್ಲದೇ, ಇಷ್ಟವಿಲ್ಲದೇ ಹೋದರೂ, ಬೇಡಬೇಡವೆಂದರೂ ಭಿನ್ನಭಿನ್ನ ಯೋನಿಗಳಲ್ಲಿ ಹುಟ್ಟಿದರೆ ಅದಕ್ಕೆ **ಜನ್ಮ** ಎಂದು ಹೆಸರು. ತಂದೆತಾಯಿಯರು ನಮಗೆ ಗಂಡುಮಗು ಬೇಕಾಗಿತ್ತು, ಅಯ್ಯೋ, ಹೆಣ್ಣು ಮಗು ಹುಟ್ಟಿದೆ; ನಮಗೆ ಹೆಣ್ಣುಮಗು ಬೇಕಾಗಿತ್ತು, ಛೇ, ಗಂಡು ಮಗು ಹುಟ್ಟಿತು, ನಮಗೆ ಅಂಥಾ ಮಗು ಬೇಕಾಗಿತ್ತು, ಇಂಥ ಮಗು ಬೇಕಾಗಿತ್ತು! ಆದರೆ ಇಂಥಾ ಮಗು ಹುಟ್ಟಿತಲ್ಲಪ್ಪಾ! ಎಂದು ತಪಿಸುತ್ತಾರೆ. ಇದಕ್ಕೆಲ್ಲ ಅರ್ಥವಿಲ್ಲ. ಏಕೆಂದರೆ ಹಿಂದಿನ ಕರ್ಮಗಳಿಗೆ ತಕ್ಕಂತೆ ಈಗ ಈ ಮಗುವು ಹುಟ್ಟಿದೆ ಎಂದು ನಾವು ಸಮಾಧಾನ ಮಾಡಿಕೊಳ್ಳ ಬೇಕು. ಇದು ಜನ್ಮಗಳ ಹಣೆಬರಹ!

ಆದರೆ, ಅವತಾರಗಳು ಹಾಗಲ್ಲ! ಭಗವಂತನು ತನ್ನ ಸಂಕಲ್ಪದಂತೆ, ತನ್ನ ಇಚ್ಛೆಯಂತೆ, ತನಗೆ ಹೇಗೆ ಬೇಕೋ ಹಾಗೆಯೇ ಹುಟ್ಟುತ್ತಾನೆ. ಇದಕ್ಕೇ **ಅವತಾರ** ಎಂದು ಹೆಸರು. ಭಗವಂತನ ಈ ಅವತಾರಗಳ ಬಗ್ಗೆ ನಾವು ಚರ್ಚೆ ಮಾಡುವುದು ಮೂರ್ಖತನ! ಏಕೆಂದರೆ ಇದು ಭಗವಂತನ ಸಂಕಲ್ಪ! ನೆನಪಿರಲಿ, ಇಲ್ಲಿ ನಾವು ಮಾಡಬೇಕಾದದ್ದು ಏನೆಂದರೆ: ಈ ಅವತಾರದ ರಹಸ್ಯಾರ್ಥವನ್ನು ತಿಳಿದುಕೊಂಡು ಸಂತೋಷದಿಂದ ಭಗವಂತನನ್ನು ಆರಾಧಿಸಿ ನಾವು ಕೃತಾರ್ಥರಾಗಬೇಕು. ಭಗವಂತನ ಎಲ್ಲಾ ಅವತಾರಗಳೂ ಜಗತ್ತಿನ ಒಳಿತಿ ಗಾಗಿಯೇ ಎಂದು ನಮಗೆ ತಿಳಿದಿರಬೇಕು. ಶ್ರೀರಾಮನ ಅಥವಾ ಶ್ರೀಕೃಷ್ಣನ ಜೀವನಕ್ರಮಗಳನ್ನು ನೋಡಿದಾಗ, ಕೆಲವೊಮ್ಮೆ ನಮಗೆ ಇದು ಏಕೆ ಹೀಗಾಯಿತು? ಇದು ಸರಿಯಾಗಿ ಕಾಣುತ್ತಿಲ್ಲವಲ್ಲ ಎಂದು ಸಹಜವಾಗಿ ತೋರುತ್ತದೆ. ಆದರೆ ಹೀಗೆ ಆಲೋಚಿಸುವುದೇ ನಮ್ಮ ದಡ್ಡತನ. ಏಕೆಂದರೆ ಇದು ಭಗವಂತನ ಅವತಾರ! ನೆನಪಿರಲಿ!

**ಭಗವಂತನ ನಡತೆಗಳಲ್ಲಿ ದೋಷವನ್ನು ಕಾಣಬಾರದು**

## 8. ಭಗವಂತನ ದಶಾವತಾರಗಳು

ಸರ್ವಶಕ್ತನೂ ಸರ್ವಜ್ಞನೂ ಆದ ಭಗವಂತನಿಗೆ ಸಹಸ್ರಾರು ಅವತಾರ ಗಳಿದ್ದರೂ ಪುರಾಣಗಳಲ್ಲಿ ಪ್ರಧಾನವಾಗಿ **ದಶಾವತಾರ**ಗಳನ್ನು ವರ್ಣಿಸಿದ್ದಾರೆ. ಆ ದಶಾವತಾರಗಳ ಹೆಸರುಗಳನ್ನು ನೋಡೋಣ:

**ಮತ್ಸ್ಯಃ ಕೂರ್ಮೋ ವರಾಹಶ್ಚ ನಾರಸಿಂಹಶ್ಚ ವಾಮನಃ।**
**ರಾಮೋ ರಾಮಶ್ಚ ಕೃಷ್ಣಶ್ಚ ಬೌದ್ಧಃ ಶ್ರೀಕಲ್ಕಿರೇವ ಚ॥**

೧. **ಮತ್ಸ್ಯಾವತಾರ:** ಮೀನಿನ ಅವತಾರವನ್ನು ಮಾಡಿ, ಸಮುದ್ರದ ಆಳದಲ್ಲಿ ಸೇರಿಕೊಂಡಿದ್ದ ವೇದಗಳನ್ನು ಭಗವಂತನು ತಂದುಕೊಟ್ಟನು.

೨. **ಕೂರ್ಮಾವತಾರ:** ಆಮೆಯ ಅವತಾರವನ್ನು ಮಾಡಿ ಮಂದರ ಪರ್ವತವನ್ನು ತನ್ನ ಬೆನ್ನಿನ ಮೇಲೆ ಇಟ್ಟುಕೊಂಡು ವಿಷ್ಣುವು ರಕ್ಷಿಸಿದನು.

೩. **ವರಾಹಾವತಾರ:** ಪ್ರಳಯಕಾಲದ ಸಮುದ್ರದಲ್ಲಿ ಮುಳುಗಿದ್ದ ಭೂಮಿಯನ್ನು ವರಾಹರೂಪದಿಂದ ಸ್ವಾಮಿಯು ಮೇಲಕ್ಕೆ ತಂದುಕೊಟ್ಟನು.

೪. **ನರಸಿಂಹಾವತಾರ:** ನರ-ಸಿಂಹಾವತಾರಿಯಾದ ಭಗವಂತನು ಹಿರಣ್ಯಕಶಿಪುವನ್ನು ಸಂಹರಿಸಿ ಭಕ್ತ ಪ್ರಹ್ಲಾದನನ್ನು ಅನುಗ್ರಹಿಸಿದನು.

೫. **ವಾಮನಾವತಾರ:** ವಟುರೂಪಧಾರಿಯಾದ ವಿಷ್ಣುವು ಬಲೀಂದ್ರನ ಗರ್ವವನ್ನು ನಾಶಮಾಡಿ ಅವನನ್ನು ಅನುಗ್ರಹಿಸಿದನು.

೬. **ಪರಶುರಾಮಾವತಾರ:** ಪರಶುರಾಮನಾಗಿ ಅವತರಿಸಿ ದರ್ಪಿಷ್ಠರಾಗಿದ್ದ ಕ್ಷತ್ರಿಯರನ್ನು ಸಂಹರಿಸಿ ಧರ್ಮಸ್ಥಾಪನೆಮಾಡಿದನು.

೭. **ಶ್ರೀರಾಮಾವತಾರ:** ಶ್ರೀರಾಮನಾಗಿ ಅವತರಿಸಿ ದುಷ್ಟರಾವಣನನ್ನು ಸಂಹರಿಸಿ ಧರ್ಮಾತ್ಮರಾದ ಋಷಿಮುನಿಗಳನ್ನೆಲ್ಲ ಸಂತೋಷಪಡಿಸಿದನು.

೮. **ಶ್ರೀಕೃಷ್ಣಾವತಾರ:** ಶ್ರೀಕೃಷ್ಣನಾಗಿ ಅವತರಿಸಿ ದುಷ್ಟಕಂಸನನ್ನು ಸಂಹರಿಸಿ, ಗೀತೋಪದೇಶದ ಮೂಲಕ ಜಗತ್ಕಲ್ಯಾಣಮಾಡಿದನು.

೯. **ಬುದ್ಧಾವತಾರ:** ಬುದ್ಧನಾಗಿ ಅವತರಿಸಿ ಅಹಿಂಸಾ, ವೈರಾಗ್ಯಗಳನ್ನು ಬೋಧಿಸಿ ಹಿಂಸೆ, ದ್ವೇಷಗಳನ್ನು ದೂರಮಾಡಿದನು.

೧೦. **ಕಲ್ಕಿ ಅವತಾರ:** ಕಲಿಯುಗದ ಅಂತ್ಯದಲ್ಲಿ ಸತ್ಯ, ಧರ್ಮ, ಅಹಿಂಸೆಗಳನ್ನು ಸ್ಥಾಪಿಸುವ ಮೂಲಕ ಲೋಕಕಲ್ಯಾಣವನ್ನು ಮಾಡುತ್ತಾನೆ.

**ದಶಾವತಾರಿ ಭಗವಂತನನ್ನು ಭಕ್ತಿಯಿಂದ ಪೂಜಿಸಬೇಕು**

# 9. 'ಅಷ್ಟಮೀ' ಮಹಿಮೆ

ಮಹಾತ್ಮರು ಅವತರಿಸಿದ ದಿನವನ್ನು ನಾವು '**ಜಯಂತೀ**' ಎನ್ನುತ್ತೇವೆ. ಭಗವಂತನ ಅವತಾರದ ದಿನಗಳನ್ನು '**ಜಯಂತೀ**' ಎಂದೇ ಕರೆಯುತ್ತೇವೆ. **ನರಸಿಂಹ ಜಯಂತಿ, ಪರಶುರಾಮ ಜಯಂತಿ, ಶ್ರೀರಾಮ ನವಮೀ, ಕೃಷ್ಣ ಜಯಂತಿ, ಬುದ್ಧ ಜಯಂತಿ** ಇತ್ಯಾದಿ. ಪ್ರಕೃತದಲ್ಲಿ ಶ್ರೀಕೃಷ್ಣನು ಅವತರಿಸಿದ ದಿನವನ್ನು **ಕೃಷ್ಣ ಜನ್ಮಾಷ್ಟಮೀ, ಶ್ರೀಕೃಷ್ಣ ಜಯಂತಿ, ಗೋಕುಲಾಷ್ಟಮೀ** ಎಂದೆಲ್ಲಾ ಕರೆಯುತ್ತೇವೆ. **ಶ್ರೀಕೃಷ್ಣನು ವರ್ಷಋತುವಿನ ಶ್ರಾವಣಮಾಸದ ಕೃಷ್ಣಪಕ್ಷದ ಅಷ್ಟಮೀ ತಿಥಿಯಲ್ಲಿ ರೋಹಿಣೀ ನಕ್ಷತ್ರದಲ್ಲಿ ಜನಿಸಿದನು.** ಈ ಅಷ್ಟಮೀ ತಿಥಿಯು ಹಿಂದೂಗಳಿಗೆಲ್ಲ ಪವಿತ್ರ ಪರ್ವಕಾಲವಾಗಿರುತ್ತದೆ.

ಈಗ ಈ 'ಅಷ್ಟಮೀ' ತಿಥಿಯ ಮಹತ್ತ್ವವನ್ನು ನೋಡೋಣ: 'ಶ್ರಾವಣ'ಮಾಸವು ವೇದಾಂತಶ್ರವಣಕ್ಕೆ ಶ್ರೇಷ್ಠವಾದ ಮಾಸವು. ಶ್ರಾವಣ ಮಾಸ ದಲ್ಲಿ ಭಗವದ್ಗೀತಾ, ಉಪನಿಷತ್ತುಗಳು, ಬ್ರಹ್ಮಸೂತ್ರಭಾಷ್ಯಗಳನ್ನು ಶ್ರದ್ಧೆಯಿಂದ, ಏಕಾಗ್ರತೆಯಿಂದ ಶ್ರವಣಮಾಡಿ ಆತ್ಮಜ್ಞಾನವನ್ನು ಹೊಂದಬೇಕು. ಹೀಗೆ ಬ್ರಹ್ಮ ಜ್ಞಾನಪ್ರಾಪ್ತಿಗೆ ಸಹಾಯಕವಾದ ಮಾಸ **ಶ್ರಾವಣಮಾಸ**. ಇನ್ನು **ಕೃಷ್ಣಪಕ್ಷ**; ಕತ್ತಲೆಯು ಹೆಚ್ಚಾಗಿರುವ ಪಕ್ಷ ಕೃಷ್ಣಪಕ್ಷ. ಇಲ್ಲಿ ಅಜ್ಞಾನವೇ ಕತ್ತಲೆ. ಅಜ್ಞಾನವೆಂಬ ಕತ್ತಲೆಯನ್ನು ಕಳೆದುಕೊಳ್ಳುವ ಪಕ್ಷ, ಕೃಷ್ಣಪಕ್ಷ.

ಇನ್ನು, '**ಅಷ್ಟಮೀ**'ತಿಥಿ. ಅಷ್ಟಮೀ ಎಂದರೆ ಎಂಟನೆಯದು. ಶ್ರೀಕೃಷ್ಣಾವ ತಾರವು ಎಂಟನೆಯ ಅವತಾರ. ಶ್ರೀಕೃಷ್ಣನು ವಸುದೇವ ದೇವಕಿಯರಿಗೆ ಅಷ್ಟಮ ಪುತ್ರ. ಅಷ್ಟವಸುಗಳನ್ನು ನೆನಪಿಸುವ ಸಂಖ್ಯೆ ಅಷ್ಟಮೀತಿಥಿ. ಅಷ್ಟಸಿದ್ಧಿಗಳನ್ನೂ ಅಷ್ಟ ಐಶ್ವರ್ಯಗಳನ್ನೂ ಸೂಚಿಸುವ ಸಂಖ್ಯೆ ಅಷ್ಟಮೀ. ಪಂಚಜ್ಞಾನೇಂದ್ರಿಯ ಗಳು ಹಾಗೂ ಮನೋ ಬುದ್ಧಿ ಅಹಂಕಾರಗಳನ್ನು ಜಯಿಸಬೇಕೆಂದು ಸಾರುವ ಸಂಖ್ಯೆ, ಅಷ್ಟಮೀ. ಈ ಅಷ್ಟಮೀತಿಥಿಯಲ್ಲಿ ಅವತರಿಸಿರುವ ಶ್ರೀಕೃಷ್ಣನನ್ನು ಇಂದು ಆರಾಧಿಸುವುದರಿಂದ ನಮಗೆ ಅಷ್ಟ ಐಶ್ವರ್ಯಗಳೂ ಉಂಟಾಗುತ್ತವೆ. ಅಷ್ಟ ದಾರಿದ್ರ್ಯಗಳೂ ದೂರವಾಗುತ್ತವೆ. ರೋಹಿಣೀ ನಕ್ಷತ್ರವು ಅತ್ಯಂತ ಪ್ರಶಸ್ತವೂ ಮಂಗಳಕರವೂ ಆಗಿದ್ದು, ಶ್ರೀಕೃಷ್ಣನು ರೋಹಿಣೀ ನಕ್ಷತ್ರದಲ್ಲಿ ಅವತರಿಸಿರುವುದು ಅತ್ಯಂತ ಶ್ರೇಷ್ಠವಾಗಿರುತ್ತದೆ. ಶ್ರೀಕೃಷ್ಣಭಗವಂತನು ಅವತರಿಸಿದ ಈ ಅಷ್ಟಮೀ ತಿಥಿಯಿಂದ ಅಷ್ಟಮೀ ಸಂಖ್ಯೆಗೇ ಒಂದು ಮಹತ್ತ್ವವು ಬಂದಂತಾಗಿದೆ. ಇಂದು ಅಧ್ಯಾತ್ಮಸಾಧಕರು ತಮ್ಮ ಅಷ್ಟ ಇಂದ್ರಿಯಗಳನ್ನೂ ಅಂತರ್ಮುಖ ಮಾಡಿಕೊಂಡು, ಅಷ್ಟಸಿದ್ಧಿಗಳಿಗೂ ಅಧಿಪತಿಯಾದ ಕೃಷ್ಣನನ್ನು ಪೂಜಿಸಬೇಕು.

**ಅಷ್ಟಮೀತಿಥಿಯ ಮಹತ್ತ್ವವನ್ನು ತಿಳಿದು ಶ್ರೀಕೃಷ್ಣನನ್ನು ಆರಾಧಿಸಬೇಕು**

# 10. ಆಡಿಸಿದಳೆಶೋದಾ...

ಶ್ರೀಕೃಷ್ಣನನ್ನು ಭಿನ್ನಭಿನ್ನ ಕ್ಷೇತ್ರದ ಮಹಾತ್ಮರುಗಳು ತಮತಮಗೆ ಇಷ್ಟವಾದಂತೆ ಭಿನ್ನಭಿನ್ನವಾಗಿ ಕೊಂಡಾಡಿರುತ್ತಾರೆ. ದಾಸವರೇಣ್ಯರಾದ ಪುರಂದರದಾಸರು ಕೃಷ್ಣನನ್ನು ಈ ರೀತಿ ಸ್ತುತಿಸಿದ್ದಾರೆ:

**ಜಗದೋದ್ಧಾರನಾ, ಮಗನೆಂದು ತಿಳಿಯುತಾ, ಆಡಿಸಿದಳೆಶೋದಾ;** ಶ್ರೀಕೃಷ್ಣನೆಂದರೆ ಇಡೀ ಜಗತ್ತಿಗೇ ತಂದೆ, ಜಗತ್ತಿಗೇ ದೇವರು. ಎಲ್ಲಾ ಸಂಸಾರಿಗಳನ್ನೂ ಉದ್ಧಾರಮಾಡುವ ಭಗವಂತ! ಋಷಿಮುನಿಯತಿಗಳಿಂದ ಆರಾಧಿಸಲ್ಪಡುವ ಪರಮಾತ್ಮನೇ ಶ್ರೀಕೃಷ್ಣ. ವೇದ ಉಪನಿಷತ್ತು ಪುರಾಣಗಳಿಂದ ಸ್ತುತಿಸಲ್ಪಡುತ್ತಿರುವ ಪರತತ್ತ್ವವೇ ಶ್ರೀಕೃಷ್ಣ. ಇಂಥ ಕೃಷ್ಣನನ್ನು ಯಶೋದಾದೇವಿಯು ತನ್ನ ತುಂಟಮಗನೆಂದು ಭಾವಿಸಿ, ಅವನನ್ನು ಆಡಿಸಿದಳಲ್ಲವೇ? ಇದು ಯಶೋದೆಯ ಸೌಭಾಗ್ಯವಲ್ಲವೇ? ಎಂದು ಹಾಡಿ ಹೊಗಳಿದ್ದಾರೆ.

ಬಾಲ್ಯದಲ್ಲಿ ಎಲ್ಲಾ ಮಕ್ಕಳೂ ತುಂಟತನವನ್ನೂ ಚೇಷ್ಟೆಗಳನ್ನೂ ಮಾಡುತ್ತಾರಲ್ಲವೇ? 'ಮಕ್ಕಳು' ಎಂದರೇ ತುಂಟುಗಾರರು ಎಂದರ್ಥ. ತುಂಟುತನವನ್ನು ಮಾಡದೇ, ಚೇಷ್ಟೆಗಳನ್ನು ಮಾಡದೇ ಸುಮ್ಮನೇ ಶಾಂತರಾಗಿದ್ದರೆ ಅವರು ಮಕ್ಕಳೇ ಅಲ್ಲ. ಆರೋಗ್ಯವಂತರಾದ ದೃಢಕಾಯರಾದ ಮಕ್ಕಳೆಂದರೆ ಅವರು ತುಂಬಾ ಚೂಟಿಯಾಗಿದ್ದು ತುಂಬಾ ಚೇಷ್ಟೆಗಳನ್ನು ಮಾಡುತ್ತಿರಲೇಬೇಕಲ್ಲವೇ? ಇದು ಮಕ್ಕಳುಗಳ ಸ್ವಭಾವ ಮತ್ತು ಜಾಯಮಾನ.

ಹೀಗಾಗಿ ಶ್ರೀಕೃಷ್ಣನಿಗೂ ಇದು ಅನ್ವಯವಾಗುತ್ತದೆ. ಶ್ರೀಕೃಷ್ಣನು ನಿಜವಾಗಿ ಪರಬ್ರಹ್ಮಸ್ವರೂಪನೇ ಆಗಿರಬಹುದು. ಆದರೆ ಯಶೋದೆಗೆ ಕೃಷ್ಣನು ದೇವರಲ್ಲ, ಪರಬ್ರಹ್ಮಸ್ವರೂಪನಂತೂ ಅಲ್ಲವೇ ಅಲ್ಲ; ಮತ್ತೇನೆಂದರೆ: ತುಂಟುಮಗ. ಸುಮಾರು ಮೂರರಿಂದ ಹತ್ತುವರ್ಷಗಳವರೆಗಿನ ಶ್ರೀಕೃಷ್ಣನು ಯಶೋದೆಗೆ **ಬಾಲಕೃಷ್ಣ**ನಾಗಿದ್ದನಲ್ಲವೇ? ಹೀಗಾಗಿ ಈ ಬಾಲಕೃಷ್ಣನನ್ನು ಯಶೋದೆಯು ಮಗನೆಂದು ತಿಳಿಯುತ್ತಾ ಆಟವಾಡಿಸುತ್ತಿದ್ದಳಂತೆ. ಯಾವ ಭಗವಂತನನ್ನು ಋಷಿಮುನಿಗಳು ನೂರಾರು ವರ್ಷಗಳ ಕಾಲ ತಪಸ್ಸನ್ನಾಚರಿಸಿ, ಕಾಣಲು ಬಯಸುತ್ತಾರೆಯೋ, ಅಂಥ ಪರಮೇಶ್ವರಸ್ವರೂಪಿ ಕೃಷ್ಣನನ್ನು ಯಶೋದೆಯು ತನ್ನ ಮಗನೆಂದು ಭಾವಿಸಿ ಸಾಕುತ್ತಾಳಲ್ಲವೇ? ಎಂದು ಮಹಾತ್ಮರ ಭಾವನೆ. ಕಿಟ್ಟಿಗೆ ಸ್ನಾನಮಾಡಿಸು, ಪೌಡರ್‌ಹಾಕು, ತಿಲಕವನ್ನಿಡು, ಹೊಸಹೊಸ ಬಟ್ಟೆಗಳನ್ನು ಹಾಕು, ಊಟ ಮಾಡಿಸು, ಹೊಡೆ, ಕಂಬಕ್ಕೆ ಕಟ್ಟಿಹಾಕು—ಇದನ್ನೆಲ್ಲ ಮಾಡುತ್ತಿದ್ದ ಯಶೋದೆಯ ಸೌಭಾಗ್ಯವೋ ಸೌಭಾಗ್ಯ!

**ಯಶೋದಾಪುತ್ರನೆಂದೂ ಶ್ರೀಕೃಷ್ಣನನ್ನು ಪೂಜಿಸಬೇಕು**

# 11. ಶ್ರೀಕೃಷ್ಣಜನ್ಮಾಷ್ಟಮೀ ಪೂಜೆ

**ಶ್ರೀಕೃಷ್ಣಜನ್ಮಾಷ್ಟಮೀ** ಎಂದ ಕೂಡಲೇ **'ಮಕ್ಕಳಿಗೆಲ್ಲ ಸಂತೋಷದ ಹಬ್ಬ'** ಎಂದೇ ನಾವುಗಳು ಭಾವಿಸುತ್ತೇವೆ. ಚಿಕ್ಕಪುಟ್ಟಮಕ್ಕಳಿಗೆಲ್ಲ ಕೃಷ್ಣನ ವೇಷ ಗಳನ್ನು ಹಾಕಿ, ಕೈಗಳಲ್ಲಿ ಕೊಳಲು, ಕಚ್ಚೆ ಪಂಚೆ, ಜರತಾರಿ ಅಂಚಿನ ಪಂಚೆ, ಹಣೆಗಳಲ್ಲಿ ತಿಲಕ, ತಲೆಯಮೇಲೆ ಕಿರೀಟ, ನವಿಲುಗರಿ—ಇತ್ಯಾದಿ ಅಲಂಕಾರ ಗಳನ್ನು ಮಾಡಿ ಶಾಲೆಗಳಲ್ಲಿ, ಮನೆಮಠಗಳಲ್ಲಿ ಸಂತೋಷಪಡುತ್ತೇವೆ. ಆ ಮುದ್ದು ಕಂದಗಳನ್ನು ನೋಡುತ್ತಲೇ ನಮಗೆಲ್ಲ ಶ್ರೀಕೃಷ್ಣನ ಕಲ್ಪನೆಯು ಬರುತ್ತದೆ. ಕೃಷ್ಣ ಎಂದರೆ ಹೀಗಿದ್ದ ಎಂದು ನಾವುಗಳು ಕಲ್ಪಿಸಿಕೊಳ್ಳುತ್ತೇವೆ.

ಇನ್ನು ಮತ್ತೆ ಕೆಲವರು ಶ್ರೀಕೃಷ್ಣಜನ್ಮಾಷ್ಟಮಿಯಂದು ಸಭೆಸಮಾರಂಭಗಳಲ್ಲಿ ಶ್ರೀಕೃಷ್ಣನ ಫೋಟೋಗಳನ್ನು ಇಟ್ಟು, ಶ್ರೀಕೃಷ್ಣನಂತೆ ವೇಷಹಾಕಿರುವ ಪುಟ್ಟ ಮಕ್ಕಳಿಂದ ನೃತ್ಯ, ಗಾನಗಳನ್ನೂ ಮಾಡಿಸುತ್ತಾರೆ. ಆ ಪುಟ್ಟಪುಟ್ಟ ಮಕ್ಕಳಿಂದಲೇ ಶ್ರೀಕೃಷ್ಣನ ಬಗ್ಗೆ ನಾಲ್ಕಾರು ತೊದಲು ಮಾತುಗಳನ್ನಾಡಿಸುತ್ತಾರೆ. ಇದನ್ನೆಲ್ಲಾ ನೋಡುತ್ತಿರುವ ಸಭಿಕರಿಗೆ ನಗು, ಸಂತೋಷ, ಆನಂದ, ಏನೋ ಒಂದು ರೀತಿಯ ತೃಪ್ತಿಗಳೆಲ್ಲವೂ ಉಂಟಾಗುತ್ತವೆ. ಈ ಕಾರ್ಯಕ್ರಮಗಳನ್ನೆಲ್ಲ ಕೆಲವರು ವಿಡಿಯೋ ಚಿತ್ರಮಾಡಿ, ತಮ್ಮ ತಮ್ಮ ಮನೆಗಳಲ್ಲಿ ನೋಡಿ ಆನಂದಿಸುತ್ತಾರೆ.

ಇನ್ನು, ಈ ಕೃಷ್ಣಜನ್ಮಾಷ್ಟಮಿಯಂದು ಕೆಲವರು ಸದ್‌ಗೃಹಸ್ಥರು ತಮ್ಮ ತಮ್ಮ ಮನೆಗಳಲ್ಲಿ ಶ್ರೀಕೃಷ್ಣನ ಭಾವಚಿತ್ರವನ್ನು ಇಟ್ಟು ಅದನ್ನು ಪತ್ರ ಪುಷ್ಪಗಳಿಂದ ಅಲಂಕರಿಸಿ, ಶ್ರದ್ಧೆಯಿಂದ ಶ್ರೀಕೃಷ್ಣಪರಮಾತ್ಮನ ಪೂಜೆಯನ್ನು ಮಾಡುತ್ತಾರೆ. ಶ್ರೀಕೃಷ್ಣನ ಸ್ತೋತ್ರಗಳನ್ನು ಪಾರಾಯಣಮಾಡಿ, ಅಷ್ಟೋತ್ತರಶತನಾಮಾವಳಿ, ಸಹಸ್ರನಾಮಾವಳಿಗಳಿಂದ ಪೂಜಿಸುತ್ತಾರೆ. ವಿಶೇಷ ಭಜನೆ, ಹಾಡು, ನರ್ತನ ಗಳನ್ನೂ ಭಾವುಕರಾಗಿ ಮಾಡುತ್ತಾರೆ. ಕೆಲವರು ಉಯ್ಯಾಲೆಸೇವೆಯನ್ನೂ ಶ್ರೀಕೃಷ್ಣನಿಗೆ ಮಾಡುತ್ತಾರೆ.

ಇವೆಲ್ಲದರ ಜೊತೆಗೆ ಶ್ರೀಬಾಲಕೃಷ್ಣನಿಗೆ ಪ್ರಿಯವಾದಂಥ ಕೋಡುಬಳೆ, ಚಕ್ಕುಲಿ, ತೇಂಗೊಳಲು, ನಾನಾರೀತಿಯ ಉಂಡೆಗಳು, ಗೊಜ್ಜವಲಕ್ಕಿ, ಮೊಸರು ಅವಲಕ್ಕಿಗಳನ್ನು ನೈವೇದ್ಯಮಾಡುತ್ತಾರೆ. ಶ್ರೀಬಾಲಕೃಷ್ಣನನ್ನು ನೆಪಮಾಡಿಕೊಂಡು ಸಿಹಿಖಾರದ ತಿಂಡಿಗಳನ್ನು ನೈವೇದ್ಯಮಾಡಿ ಮನೆಯ ಮಕ್ಕಳಲ್ಲಿ ಹಂಚುವುದೂ ಒಂದು ಸಂತೋಷವೇ ಅಲ್ಲವೇ? ಸ್ನೇಹಿತರನ್ನೂ, ನೆಂಟರಿಷ್ಟರನ್ನೂ ಮನೆಗೆ ಕರೆದು ಈ ಉಪಾಹಾರಗಳನ್ನು ಅವರಿಗೂ ಕೊಟ್ಟು ತಾವೂ ಪ್ರಸಾದರೂಪದಿಂದ ತಿನ್ನುತ್ತಾರೆ. ಹೀಗೆ ಶ್ರೀಕೃಷ್ಣಜನ್ಮಾಷ್ಟಮಿಯನ್ನು ಆಚರಿಸಿ ಸಂತೋಷಪಡುತ್ತಾರೆ.

**ಶ್ರೀಕೃಷ್ಣಜನ್ಮಾಷ್ಟಮಿಯಂದು ಹೇಗಾದರೂ ಕೃಷ್ಣನನ್ನು ಆರಾಧಿಸಬೇಕು**

# 12. ವಿಶ್ವರೂಪಧಾರಿ ಶ್ರೀಕೃಷ್ಣ

ವಸುದೇವದೇವಕಿಯರಲ್ಲಿ ಹುಟ್ಟಿ, ಮಾನವನಂತೆ ತೋರುತ್ತಿದ್ದರೂ ಕೃಷ್ಣನನ್ನು ಮನುಷ್ಯಮಾತ್ರನೆಂದು ತಿಳಿಯಬಾರದು. ಮತ್ತೇನೆಂದರೆ ಶ್ರೀಕೃಷ್ಣನನ್ನು ಸರ್ವಜ್ಞ,ಸರ್ವಶಕ್ತನಾದ ಪರಮಾತ್ಮನೆಂದೇ ತಿಳಿಯಬೇಕು. ಏಕೆಂದರೆ ಶ್ರೀಕೃಷ್ಣನು ಅರ್ಜುನನಿಗೆ ತನ್ನ ವಿಶ್ವರೂಪವನ್ನು ತೋರಿಸಿರುತ್ತಾನಲ್ಲವೇ? ಭಗವದ್ಗೀತೆಯಲ್ಲಿ **ವಿಶ್ವರೂಪದರ್ಶನಯೋಗ** ಎಂಬ ಹೆಸರಿನಿಂದ ಒಂದು ಅಧ್ಯಾಯವೇ (ಹನ್ನೊಂದನೆಯ ಅಧ್ಯಾಯ) ಇದೆ. ಇದಕ್ಕೆ **ವಿಶ್ವರೂಪದರ್ಶನಯೋಗ** ಎಂದೇ ಹೆಸರಿದೆ.

ವಿಶ್ವರೂಪದರ್ಶನ ಎಂದರೆ ಇಡೀ ವಿಶ್ವವನ್ನೇ ತೋರಿಸಿದ ಶ್ರೀಕೃಷ್ಣ ಪರಮಾತ್ಮನ ಮಹಿಮೆಯ ಯೋಗವಿದು. ಈ ಹನ್ನೊಂದನೆಯ ಅಧ್ಯಾಯದ ಎಲ್ಲಾ ಶ್ಲೋಕಗಳನ್ನೂ ಅರ್ಥಸಮೇತ ಅಧ್ಯಯನ ಮಾಡಿದಾಗ ನಮಗೆ ಶ್ರೀಕೃಷ್ಣನು ಪರಮಾತ್ಮನೇ ಎಂಬ ನಿಶ್ಚಯವು ಉಂಟಾಗುತ್ತದೆ. ನಾನೀಗ ಇಲ್ಲಿ ಒಂದೆರಡು ಶ್ಲೋಕಗಳನ್ನು ಮಾತ್ರ ಉದ್ಧರಿಸುತ್ತೇನೆ:

**ಪಶ್ಯಾದಿತ್ಯಾನ್ ವಸೂನ್ ರುದ್ರಾನ್ ಅಶ್ವಿನೌ ಮರುತಸ್ತಥಾ।**
**ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ॥**

ಭಗವದ್ಗೀತಾ ೧೧-೬

*ಅರ್ಜುನನೇ, ನನ್ನಲ್ಲಿ ದ್ವಾದಶಾದಿತ್ಯರನ್ನೂ, ಅಷ್ಟವಸುಗಳನ್ನೂ, ಏಕಾದಶರುದ್ರರನ್ನೂ, ಅಶ್ವಿನೀದೇವತೆಗಳನ್ನೂ, ಸಪ್ತ ಮರುದ್ದೇವತೆಗಳನ್ನೂ ನೋಡು; ಮತ್ತು ಇನ್ನೂ ಬಹಳ ಅದೃಷ್ಟಪೂರ್ವರೂಪಗಳನ್ನೂ ಆಶ್ಚರ್ಯಗಳನ್ನೂ ನನ್ನಲ್ಲಿ ನೋಡು, ಭಾರತ.*

ಹೀಗೆಂದು ಹೇಳಿ ಕೃಷ್ಣನು ಅರ್ಜುನನಿಗೆ ತನ್ನ ವಿಶ್ವರೂಪವನ್ನು ಕ್ಷಣ ಮಾತ್ರದಲ್ಲಿ ತೋರಿಸಿದನು. ಅದನ್ನೆಲ್ಲ ಅತ್ಯಾಶ್ಚರ್ಯದಿಂದ ಹಾಗೂ ಸಂತೋಷದಿಂದ ಅರ್ಜುನನು ನೋಡಿದನು ಕೂಡ. ಆ ವಿಶ್ವರೂಪವನ್ನು ನೋಡುತ್ತಾ ಆಶ್ಚರ್ಯಚಕಿತನಾಗಿ ಅರ್ಜುನನು ಕೃಷ್ಣನಿಗೆ ಹೀಗೆ ಹೇಳಿದನು:

**ಪಶ್ಯಾಮಿ ದೇವಾಂಸ್ತವ ದೇವ ದೇಹೇ**
**ಸರ್ವಾಂಸ್ತಥಾ ಭೂತವಿಶೇಷಸಂಘಾನ್।**
**ಬ್ರಹ್ಮಾಣಮೀಶಂ ಕಮಲಾಸನಸ್ಥಮ್**
**ಋಷೀಂಶ್ಚ ಸರ್ವಾನ್ ಉರಗಾಂಶ್ಚ ದಿವ್ಯಾನ್॥**

ಭಗವದ್ಗೀತಾ ೧೧-೧೫

ಅರ್ಜುನನು ಶ್ರೀಕೃಷ್ಣನ ಶರೀರದಲ್ಲಿ ದೇವತೆಗಳನ್ನೆಲ್ಲ ಕಂಡನು ಕೂಡ.

**ವಿಶ್ವರೂಪನೆಂದೇ ಶ್ರೀಕೃಷ್ಣನನ್ನು ಪೂಜಿಸಬೇಕು**

# 13. ಕೃಷ್ಣನ ಅನೇಕ ಮುಖಗಳು

**ಕರ್ಷಯತಿ ಇತಿ ಕೃಷ್ಣಃ;** ಎಲ್ಲರನ್ನೂ ತನ್ನ ಕಡೆಗೆ ಸೆಳೆಯುವವನಿಗೆ **ಕೃಷ್ಣ** ಎಂದು ಹೆಸರು. ಕೃಷ್ಣನಿಗೆ ಆಕರ್ಷಿತರಾಗದವರು ಯಾರೂ ಇಲ್ಲ; ಹೀಗಾಗಿ ಬಾಲಕರಿಂದ ವೃದ್ಧರ ವರೆಗೂ, ಯತಿಗಳಿಂದ ಸಂಸಾರಿಗಳ ವರೆಗೂ, ರಾಜರಿಂದ ರೈತರವರೆಗೂ, ಋಷಿಮುನಿಗಳಿಂದ ಹಿಡಿದು ದೇವತೆಗಳವರೆಗೂ, ಪಂಡಿತರಿಂದ ಹಿಡಿದು ಪಾಮರರ ವರೆಗೂ ಎಲ್ಲರನ್ನೂ ಕೃಷ್ಣನು ತನ್ನ ಕಡೆಗೆ ಸಹಜವಾಗಿ ಸೆಳೆಯುತ್ತಿದ್ದನು. ಹೀಗಾಗಿ ಅವನು **ಕೃಷ್ಣ** ಎನಿಸಿದ್ದಾನೆ. ಇಂಥ ಕೃಷ್ಣನ ಕೆಲವು ಉದಾಹರಣೆಗಳನ್ನು ನೋಡೋಣ:

**ಬಾಲಕೃಷ್ಣ** : ಬಾಲಕರನ್ನು ಸಂತೋಷಪಡಿಸುವ **ಕೃಷ್ಣ**

**ಗೋಪಾಲಕೃಷ್ಣ** : ಗೋಪಾಲಕರನ್ನು ಆನಂದಪಡಿಸುವ **ಕೃಷ್ಣ**

**ಮುದ್ದು ಕೃಷ್ಣ** : ಮುದ್ದಾಗಿ ಮಾತನಾಡುತ್ತಾ ಆಕರ್ಷಿಸುವ **ಕೃಷ್ಣ**

**ಮುರಳಿ ಕೃಷ್ಣ** : ಕೊಳಲನ್ನು ಬಾರಿಸುತ್ತಾ ಸಂತೋಷಿಸುವ **ಕೃಷ್ಣ**

**ನವನೀತ ಕೃಷ್ಣ** : ಬೆಣ್ಣೆಯನ್ನು ಕದ್ದು ತಿನ್ನುತ್ತಾ ಆನಂದಿಸುವ **ಕೃಷ್ಣ**

**ಸುಂದರ ಕೃಷ್ಣ** : ಸುಂದರಬಾಲನಾಗಿ ಆಕರ್ಷಿಸುವ **ಕೃಷ್ಣ**

**ಹರಿ ಕೃಷ್ಣ** : ಸಕಲ ದುಃಖಗಳನ್ನು ನಾಶಮಾಡುವ **ಕೃಷ್ಣ**

**ನಾಟ್ಯ ಕೃಷ್ಣ** : ನಟನೆ ಮಾಡುತ್ತಾ ಎಲ್ಲರನ್ನೂ ಆಕರ್ಷಿಸುವ **ಕೃಷ್ಣ**

**ವೈಷ್ಣವಪದ ಕೃಷ್ಣ** : ಮೋಕ್ಷಸ್ವರೂಪಿಯಾಗಿ ಅಸಂಗಿಯಾದ **ಕೃಷ್ಣ**

**ಮೋಹನ ಕೃಷ್ಣ** : ತನ್ನ ಮನಮೋಹಕ ರೂಪದಿಂದಿರುವ **ಕೃಷ್ಣ**

**ರಾಧಾಕೃಷ್ಣ** : ಆದರ್ಶ ಗೃಹಸ್ಥನಾಗಿ ಆನಂದಿಯಾದ **ಕೃಷ್ಣ**

**ರಾಮಕೃಷ್ಣ** : ಸ್ವಾತ್ಮಾರಾಮನಾಗಿ ಆತ್ಮನಿಷ್ಠನಾಗಿರುವ **ಕೃಷ್ಣ**

**ಗೋಪಿಕಾಕೃಷ್ಣ** : ಗೋಪಿಕೆಯರ ಹೃದಯವನ್ನು ಗೆದ್ದ **ಕೃಷ್ಣ**

**ಮುಕ್ತಿಕೃಷ್ಣ** : ಯತಿಗಳಿಗೆ ಮೋಕ್ಷವನ್ನು ಕರುಣಿಸುವ **ಕೃಷ್ಣ**

**ಘೋರಕೃಷ್ಣ** : ದುಷ್ಟರಿಗೆ ಭಯಂಕರನಾಗಿ ಕಾಣುವ **ಕೃಷ್ಣ**

## 14. ಭೀಷ್ಮರು ಕಂಡ ಕೃಷ್ಣ

ಕುರುವಂಶಕ್ಕೆ ಪಿತಾಮಹರು ಭೀಷ್ಮಾಚಾರ್ಯರು; ನೈಷ್ಠಿಕ ಬ್ರಹ್ಮಚಾರಿಗಳೂ ಸಕಲಶಾಸ್ತ್ರಪಾರಂಗತರೂ ಧರ್ಮನಿಷ್ಠರೂ ಬ್ರಹ್ಮಜ್ಞಾನಿಪುಂಗವರೂ ಆಗಿದ್ದ ಭೀಷ್ಮರು ವಯೋವೃದ್ಧರೂ ಕೂಡ. ಈ ಮಹಾತ್ಮರು ಕೃಷ್ಣನನ್ನು ಹೀಗೆ ತಮ್ಮ **ಭೀಷ್ಮಸ್ತವರಾಜಸ್ತೋತ್ರ**ದಲ್ಲಿ ವಂದಿಸಿದ್ದಾರೆ:

**ಅಪುಣ್ಯಪುಣ್ಯೋಪರಮೇ ಯಂ ಪುನರ್ಭವನಿರ್ಭಯಾಃ।**
**ಶಾಂತಾಃ ಸಂನ್ಯಾಸಿನೋ ಯಾಂತಿ ತಸ್ಮೈ 'ಮೋಕ್ಷಾತ್ಮನೇ' ನಮಃ॥**

*ಶಾಂತರಾದ ಸಂನ್ಯಾಸಿಗಳು ಪುಣ್ಯಪಾಪಕರ್ಮಗಳನ್ನೆಲ್ಲ ಸುಟ್ಟು ಬೂದಿ ಮಾಡಿಕೊಂಡಿರುತ್ತಾರಲ್ಲವೇ? ಇನ್ನು, ಇಂಥ ಯತಿಗಳಿಗೆ ಜನ್ಮಾಂತರದ ಅಥವಾ ಶರೀರಾಂತರದ ಭಯವೆಂಬುದು ಇರಲಾರದು. ಇಂಥ ಯತಿಗಳಾದ ಬ್ರಹ್ಮಜ್ಞಾನಿಗಳು ಆತ್ಮಜ್ಞಾನದ ಬಲದಿಂದ ಬದುಕಿರುವಾಗಲೇ ಯಾವ ಮೋಕ್ಷಪದವನ್ನು ಹೊಂದುತ್ತಾರೆಯೋ, ಅಂಥ ಮೋಕ್ಷಸ್ವರೂಪನಾದ ಶ್ರೀಕೃಷ್ಣಪರಮಾತ್ಮನಿಗೆ ನಮಸ್ಕಾರಗಳು.*

ಶರಗಳ ಹಾಸಿಗೆಯ ಮೇಲೆ ಮಲಗಿಕೊಂಡಿದ್ದ ಶ್ರೀಭೀಷ್ಮಾಚಾರ್ಯರು ಶ್ರೀಕೃಷ್ಣನನ್ನು ನೋಡುತ್ತಾ, ಶ್ರೀಕೃಷ್ಣನನ್ನೇ ಧ್ಯಾನಮಾಡುತ್ತಾ ಈ ಮೇಲಿನ ಶ್ಲೋಕದಿಂದ ಶ್ರೀಕೃಷ್ಣನಿಗೆ ನಮಸ್ಕಾರವನ್ನು ಮಾಡಿರುತ್ತಾರೆ. ಇದರ ಸ್ವಾರಸ್ಯಾರ್ಥವನ್ನು ನೋಡೋಣ:

ಸಾಮಾನ್ಯ ಜನಗಳು ಕವಿಗಳು ಹಾಗೂ ವಿದ್ವಾಂಸರುಗಳು 'ಶ್ರೀಕೃಷ್ಣ' ಎಂದರೆ ವಸುದೇವದೇವಕಿಯರ ಪುತ್ರನೆಂದು ಭಾವಿಸುತ್ತಾರೆ; ಇನ್ನು ಕೆಲವರು ಉಪಾಸಕರು ಶ್ರೀಕೃಷ್ಣನನ್ನು ಒಬ್ಬ ದೇವರೆಂದು ಭಾವಿಸುತ್ತಾರೆ; ಮತ್ತೆ ಕೆಲವರು ಶ್ರೀಕೃಷ್ಣನನ್ನು ಬ್ರಹ್ಮಜ್ಞಾನಿಯೆಂದೋ ಯೋಗೀಶ್ವರನೆಂದೋ ತಿಳಿಯುತ್ತಾರೆ. ಆದರೆ ಭೀಷ್ಮಾಚಾರ್ಯರ ದೃಷ್ಟಿಯೇ ಅತ್ಯಂತ ಭಿನ್ನವಾಗಿದೆ. ಶ್ರೀಕೃಷ್ಣನೆಂದರೆ ಒಬ್ಬ ದೇವತೆಯಲ್ಲ ಅವತಾರಪುರುಷನೂ ಅಲ್ಲ, ಬ್ರಹ್ಮಜ್ಞಾನಿಯೂ ಅಲ್ಲ, ಅಥವಾ ಒಬ್ಬ ಮಹಾತ್ಮನೂ ಅಲ್ಲ; ಮತ್ತೇನೆಂದರೆ **ಮೋಕ್ಷಸ್ವರೂಪನೇ ಶ್ರೀಕೃಷ್ಣ** ಎಂದು ಭೀಷ್ಮಪಿತಾಮಹರು ಹೇಳಿದ್ದಾರೆ. ಇದನ್ನೇ ಶ್ರೀಕೃಷ್ಣನು **ತದ್ಧಾಮ ಪರಮಂ ಮಮ; ತದ್ ವಿಷ್ಣೋಃ ಪರಮಂ ಪದಂ** ಎಂದು ಗೀತೆಯಲ್ಲಿ ಹೇಳಿರುತ್ತಾನೆ. **ಬ್ರಹ್ಮಜ್ಞಾನಿಗಳ ದೃಷ್ಟಿಯಿಂದ ಶ್ರೀಕೃಷ್ಣ ಎಂದರೆ ಬ್ರಹ್ಮಸ್ವರೂಪನೇ.** ಸಚ್ಚಿದಾನಂದಸ್ವರೂಪವೂ ಅಜ ಅಜರ ಅಮೃತ ಅಭಯ ಅದ್ವಯ ಸ್ವರೂಪವೂ ಆಗಿರುವ ಪರಬ್ರಹ್ಮವೆಂದೇ ಕೃಷ್ಣನನ್ನು ಬ್ರಹ್ಮವಿದರು ತಿಳಿದಿರುತ್ತಾರೆ.

**ಶ್ರೀಕೃಷ್ಣನನ್ನು ಮೋಕ್ಷಸ್ವರೂಪನೆಂದೇ ತಿಳಿಯುಬೇಕು**

# 15. ಶ್ರೀಕೃಷ್ಣನ ಪ್ರಸಿದ್ಧ ಮೂವತ್ತು ನಾಮಗಳು

೧. **ಶ್ರೀಕೃಷ್ಣ:** = ಭಕ್ತರುಗಳನ್ನು ತನ್ನ ಕಡೆಗೆ ಸೆಳೆಯುವವನು
೨. **ಕೇಶವ:** = ಸುಂದರವಾದ ಕೇಶಗಳನ್ನುಳ್ಳವನು
೩. **ನಾರಾಯಣ:** = ಎಲ್ಲಾ ನರರಿಗೂ ಪರಮಗತಿಯಾಗಿರುವವನು
೪. **ಗೋವಿಂದ:** = ಭೂಮಿಯನ್ನು ಉದ್ಧಾರಮಾಡಿದವನು
೫. **ಜಗದ್ಗುರು:** = ಜಗತ್ತಿಗೇ ಗುರುವಾದವನು
೬. **ಹೃಷೀಕೇಶ:** = ಹೃಷೀಕಾಣಾಮ್ ಈಶಃ, ಇಂದ್ರಿಯಗಳಿಗೆ ಈಶ
೭. **ದಾಮೋದರ:** = ಹಗ್ಗದಿಂದ ಕಟ್ಟಲ್ಪಟ್ಟವನು
೮. **ವಾಸುದೇವ:** = ವಸುದೇವನ ಸುಪುತ್ರ
೯. **ಪುರುಷೋತ್ತಮ:** = ಕ್ಷರಾಕ್ಷರಗಳನ್ನು ಮೀರಿದ ಪರಬ್ರಹ್ಮತತ್ತ್ವ
೧೦. **ಅಚ್ಯುತ:** = ತನ್ನ ನಿಜಸ್ವರೂಪದಿಂದ ಜಾರಿಬೀಳದವನು
೧೧. **ಜನಾರ್ದನ:** = ಜನಗಳಿಂದ ಪ್ರಾರ್ಥಿಸಲ್ಪಡುವವನು
೧೨. **ಹರಿ:** = ಭಕ್ತರ ದುಃಖಗಳನ್ನು ದೂರಮಾಡುವವನು
೧೩. **ದೇವಕೀನಂದನ:** = ದೇವಕೀದೇವಿಗೆ ಆನಂದಕೊಡುವವನು
೧೪. **ಯಶೋದಾನಂದನ:** = ಯಶೋದೆಗೆ ಆನಂದವನ್ನು ಕೊಡುವವನು
೧೫. **ನಂದಗೋಪಕುಮಾರ** = ನಂದಗೋಪನ ಸಾಕುಮಗ
೧೬. **ಗೋಪಾಲ:** = ಗೋವುಗಳನ್ನು ಪಾಲನೆ ಮಾಡುವವನು
೧೭. **ಕಂಸಚಾಣೂರಮರ್ದನ:** = ಕಂಸ, ಚಾಣೂರರನ್ನು ಸಂಹರಿಸಿದವನು
೧೮. **ಯಾದವೇಂದ್ರ:** = ಯಾದವಕುಲಕ್ಕೆ ಒಡೆಯನು
೧೯. **ವಾರ್ಷ್ಣೇಯ:** = ವೃಷ್ಣಿ ವಂಶದವನು
೨೦. **ಮಾಧವ:** = ಲಕ್ಷ್ಮೀದೇವಿಯ ಪತಿ
೨೧. **ಯೋಗೇಶ್ವರ:** = ಯೋಗಕ್ಕೆ ಈಶ್ವರನಾದವನು
೨೨. **ವಿಷ್ಣು:** = ಸರ್ವತ್ರ ವ್ಯಾಪಕನಾಗಿರುವವನು
೨೩. **ಮಧುಸೂದನ:** = ಮಧು ಎಂಬ ರಾಕ್ಷಸನನ್ನು ಸಂಹರಿಸಿದವನು
೨೪. **ಬಾಲಕೃಷ್ಣ:** = ಬಾಲಕನಾಗಿ ಸಂತೋಷಪಡಿಸಿದ ಕೃಷ್ಣ
೨೫. **ಮುರಳೀಧರ:** = ಕೊಳಲನ್ನು ಧರಿಸಿರುವ ಕೃಷ್ಣ
೨೬. **ಗೋಪಿಕಾ ಕೃಷ್ಣ:** = ಗೋಪಿಕೆಯರಿಗೆ ಪ್ರಿಯನಾದ ಕೃಷ್ಣ
೨೭. **ಗೀತಾಚಾರ್ಯ:** = ಭಗವದ್ಗೀತೆಯನ್ನು ಉಪದೇಶಿಸಿದವನು
೨೮. **ಅರ್ಜುನಸಖ:** = ಅರ್ಜುನನ ಪ್ರಿಯಮಿತ್ರ
೨೯. **ರಾಧಾಕೃಷ್ಣ:** = ರಾಧೆಯ ಪತಿಯಾದ ಕೃಷ್ಣ
೩೦. **ರುಕ್ಮಿಣೀಪತಿ:** = ರುಕ್ಮಿಣಿಯ ಪತಿ

# 16. ಬಾಲಮುಕುಂದ

ಶ್ರೀಕೃಷ್ಣನ ನಾನಾ ಲೀಲೆಗಳಲ್ಲಿ ಬಾಲಲೀಲೆಯೂ ಒಂದು. ಈ ಬಾಲ ಲೀಲೆಗಳೂ ನೂರಾರು. ಇವೆಲ್ಲವೂ ಬಾಲಕರಿಗೆ ಆಪ್ಯಾಯಮಾನವಾಗಿರುತ್ತವೆ. ಇವುಗಳಲ್ಲಿ **ಬಾಲಂ ಮುಕುಂದಂ ಮನಸಾ ಸ್ಮರಾಮಿ** ಎಂಬುದೂ ಒಂದು. ಇದೊಂದು ಪ್ರಸಿದ್ಧವಾದ ಶ್ಲೋಕ:

**ಕರಾರವಿಂದೇನ ಪದಾರವಿಂದಂ**
**ಮುಖಾರವಿಂದೇ ವಿನಿವೇಶಯಂತಮ್ ।**
**ವಟಸ್ಯ ಪತ್ರಸ್ಯ ಪುಟೇ ಶಯಾನಂ**
**ಬಾಲಂ ಮುಕುಂದಂ ಮನಸಾ ಸ್ಮರಾಮಿ ॥**

ಪ್ರಾಸಬದ್ಧವಾದ ಸುಂದರಶ್ಲೋಕವಿದು. ಭಾವಾರ್ಥವನ್ನು ನೋಡೋಣ:

*ತನ್ನ ಕರಾರವಿಂದದಿಂದ ಪದಾರವಿಂದವನ್ನು ಮುಖಾರವಿಂದದಲ್ಲಿ ಇರಿಸಿಕೊಂಡು, ಆಲದ ಎಲೆಯ ಮೇಲೆ ಮಲಗಿರುವಂಥ ಬಾಲ ಮುಕುಂದನನ್ನು ಶಿರಬಾಗಿ ನಮಸ್ಕರಿಸುತ್ತೇನೆ.*

ಎಂಥಾ ಸುಂದರವಾದ ಹಾಗೂ ಮನೋಹರವಾದ ಶ್ಲೋಕವಿದು! ಈ ಶ್ಲೋಕದ ಸ್ವಾರಸ್ಯಾರ್ಥವನ್ನು ನಾವೀಗ ನೋಡೋಣ:

ಬಾಲಕೃಷ್ಣನ ಕರವು ಅರವಿಂದದಂತೆ ಕೋಮಲವಾಗಿದೆ. ಸಾಮಾನ್ಯವಾಗಿ ಪುಟಾಣಿ ಮಕ್ಕಳುಗಳ ಕೈಗಳೆಂದರೆ ಬಳ್ಳಿಯಂತೆ, ಕಮಲದಂತೆ ಕೋಮಲ ವಾಗಿರುತ್ತವೆಯಲ್ಲವೇ? ಇನ್ನು ಭಗವದವತಾರಿಯಾದ ಮುದ್ದುಕೃಷ್ಣನ ಕೈಯನ್ನು ಹೇಳಬೇಕೇ? ಹೀಗೆ ಕಮಲಪುಷ್ಪದಂತೆ ಸುಂದರವಾದ ತನ್ನ ಬಲಗೈನಿಂದ; **ಪದಾರವಿಂದಂ** = ತನ್ನ ಪಾದಾರವಿಂದವನ್ನು, ಎಂದರೆ ಕಮಲದಂತೆ ಮಧುರ ಸುಂದರ ಕೋಮಲವಾದ ಒಂದು ಕಾಲನ್ನು; **ಮುಖಾರವಿಂದೇ** ಎಂದರೆ ಕಮಲದಂತೆ ಮಧುರವಾದ ಮುಖದೊಳಗೆ, ಅಂದರೆ ಬಾಯಿಯೊಳಗೆ ಎಂದರ್ಥ. **ವಿನಿವೇಶಯಂತಂ** ಎಂದರೆ ಇರಿಸಿಕೊಂಡಿರುವ,

**ವಟಸ್ಯ ಪತ್ರಸ್ಯ ಪುಟೇ ಶಯಾನಂ:** ಆಲದ ಮರದ ಒಂದು ಎಲೆಯ ಮೇಲೆ ಮಲಗಿಕೊಂಡಿರುವಂಥ; ಇಡೀ ವಿಶ್ವವನ್ನೇ ತನ್ನೊಳಗೆ ಅಡಕಮಾಡಿ ಕೊಂಡು, ವಿಶ್ವರೂಪಧಾರಿಯಾಗಿರುವ ಕೃಷ್ಣನು ಬಾಲಮುಕುಂದನಾಗಿ ಆರು ಇಂಚುಗಳ ಆಲದ ಎಲೆಯ ಮೇಲೆ ಪವಡಿಸಿದ್ದಾನೆ. ಇವನೇ ನಿಜವಾಗಿ ಜಗದ್ಗುರುವೂ ಆಗಿದ್ದಾನೆ. ಇಂಥ ಕೃಷ್ಣನಿಗೆ ನಮಸ್ಕಾರ.

**ಶ್ರೀಕೃಷ್ಣನನ್ನು ಬಾಲಕೃಷ್ಣನೆಂದೂ ಆರಾಧಿಸಬೇಕು**

# 17. ಶ್ರೀಶಂಕರರು ಕಂಡ ಕೃಷ್ಣ

ಸಾಧು ಸಂತರು, ತಪಸ್ವಿಗಳು, ಯತಿಗಳು, ಗೃಹಸ್ಥರು, ಮಹರ್ಷಿಗಳು, ವಿದ್ವಾಂಸರು, ದಾಸರು, ಹರಿಕಥೆದಾಸರು, ಸಂಗೀತಗಾರರು, ನಾಟಕಕಾರರು, ಶಿಲ್ಪಿಗಳು, ವೈದ್ಯರು, ದಾರ್ಶನಿಕರು, ಆಸ್ತಿಕರು, ನಾಸ್ತಿಕರು—ಎಲ್ಲರೂ ಶ್ರೀಕೃಷ್ಣನನ್ನು ತಮ್ಮತಮ್ಮದ್ದೇ ಆದ ರೀತಿಯಲ್ಲಿ ಸ್ತುತಿಸಿರುತ್ತಾರೆ. ವಿಶ್ವರೂಪಿಯಾದ ಶ್ರೀಕೃಷ್ಣನಿಗೆ ಎಲ್ಲವೂ ಹೊಂದುತ್ತದೆ. ಅದ್ವೈತವೇದಾಂತಾಚಾರ್ಯರಾದ ಶ್ರೀಶಂಕರಾಚಾರ್ಯರೂ ಕೂಡ ತಮ್ಮ ಗೀತಾಭಾಷ್ಯದ ಪ್ರಾರಂಭದಲ್ಲಿ ಶ್ರೀಕೃಷ್ಣನನ್ನು ಕುರಿತು ಹೀಗೆ ಹೇಳಿದ್ದಾರೆ:

**ಸ ಚ ಭಗವಾನ್ ಜ್ಞಾನೈಶ್ವರ್ಯ ಶಕ್ತಿ ಬಲ ವೀರ್ಯ ತೇಜೋಭಿಃ ಸದಾ ಸಂಪನ್ನಃ..... ನಿತ್ಯಶುದ್ಧಬುದ್ಧಮುಕ್ತಸ್ವರೂಪೋಽಪಿ ಸನ್ ಸ್ವಮಾಯಯಾ ದೇಹವಾನ್ ಇವ ಜಾತ ಇವ ಲೋಕಾನುಗ್ರಹಂ ಕುರ್ವನ್ ಇವ ಚ ಲಕ್ಷ್ಯತೇ। ಭೌಮಸ್ಯ ಬ್ರಹ್ಮಣೋ ಬ್ರಾಹ್ಮಣತ್ವಸ್ಯ ರಕ್ಷಣಾರ್ಥಂ ದೇವಕ್ಯಾಂ ವಸುದೇವಾತ್ ಅಂಶೇನ ಕೃಷ್ಣಃ ಕಿಲ ಸಂಬಭೂವ॥**

ಗೀತಾಶಾಂಕರಭಾಷ್ಯದ ಅವತರಣಿಕಾಭಾಷ್ಯಂ

*ಆ ಔಪನಿಷದ ಭಗವಂತನು ಜ್ಞಾನ ಐಶ್ವರ್ಯ ಶಕ್ತಿ ಬಲ ವೀರ್ಯ ತೇಜಸ್ಸುಗಳಿಂದ ಯಾವಾಗಲೂ ಕೂಡಿಕೊಂಡು ನಿತ್ಯಶುದ್ಧ ನಿತ್ಯಬುದ್ಧ ನಿತ್ಯಮುಕ್ತಸ್ವರೂಪನೇ ಆಗಿದ್ದರೂ, ತನ್ನ ಅಧೀನವಾದ ಮಾಯೆಯಿಂದ ದೇಹವುಳ್ಳವನಂತೆ, ಹುಟ್ಟಿದವನಂತೆ, ಲೋಕಾನು ಗ್ರಹವನ್ನು ಮಾಡುವವನಂತೆ ನಮ್ಮ ದೃಷ್ಟಿಯಿಂದ ತೋರುತ್ತಾನೆ; ಭೂಲೋಕದ ದೇವತೆಯಾದ ಬ್ರಾಹ್ಮಣ್ಯವನ್ನು ಕಾಪಾಡುವುದಕ್ಕಾಗಿ ಭಗವಂತನು ದೇವಕೀದೇವಿಯಲ್ಲಿ ವಸುದೇವನ ಅಂಶದಿಂದ ಕೃಷ್ಣನಾಗಿ ಅವತರಿಸಿದನಂತೆ.*

ಈ ವಾಕ್ಯವು ಶ್ರೀಶಂಕರಾಚಾರ್ಯರದ್ದು. ಶ್ರೀಶಂಕರಾಚಾರ್ಯರು ಶ್ರೀಕೃಷ್ಣನನ್ನು ನಿತ್ಯಶುದ್ಧಸ್ವರೂಪವಾದ ಸಚ್ಚಿದಾನಂದಮಂಗಳಸ್ವರೂಪವಾದ ಪರಬ್ರಹ್ಮವೆಂದೇ ತಿಳಿಸಿದ್ದಾರೆ. ಭಗವಂತನೇ ಶ್ರೀಕೃಷ್ಣನು. ಇಂಥ ಭಗವಂತನು ತನ್ನ ಅಧೀನವಾದ ಪ್ರಕೃತಿಯ ಮೂಲಕ ಹುಟ್ಟಿದವನಂತೆ, ದೇಹಧಾರಿಯಾದವನಂತೆ ತೋರುತ್ತಾನೆ. ವಸುದೇವದೇವಕಿಯರಿಂದ ಹುಟ್ಟಿದವನಂತೆ ಮಾಯೆಯಿಂದ ಕಾಣುತ್ತಾನೆ. ಬ್ರಾಹ್ಮಣ್ಯವನ್ನು ಉದ್ಧಾರಮಾಡಿ ಧರ್ಮವನ್ನು ಸ್ಥಾಪಿಸುವುದೇ ಶ್ರೀಕೃಷ್ಣಾವತಾರದ ಉದ್ದೇಶ ಎಂದು ಶ್ರೀಶಂಕರರು ಬರೆದಿರುತ್ತಾರೆ. ಶ್ರೀಕೃಷ್ಣನು ನಿಜವಾಗಿ ಜನ್ಮಮರಣರಹಿತನಾದ ಪರಮಾತ್ಮನೇ ಆಗಿದ್ದಾನೆ.

**ಶ್ರೀಕೃಷ್ಣನನ್ನು ಪರಬ್ರಹ್ಮವೆಂದೇ ತಿಳಿದು ಆರಾಧಿಸಬೇಕು**

# 18. ತಸ್ಮೈ ಯೋಗಾತ್ಮನೇ ನಮಃ

**ಭೀಷ್ಮಸ್ತವರಾಜ** ಎಂಬುದು ಮಹಾಭಾರತದಲ್ಲಿನ ಪಂಚರತ್ನಗಳಲ್ಲಿ ಒಂದು. ಭೀಷ್ಮಪಿತಾಮಹರು ಶ್ರೀಕೃಷ್ಣನನ್ನು ಅನೇಕ ರೀತಿಯಲ್ಲಿ ಈ ಸ್ತವರಾಜ ದಲ್ಲಿ ಸ್ತುತಿಸಿದ್ದಾರೆ.

ಶ್ರೀಕೃಷ್ಣಪರಮಾತ್ಮನನ್ನು ಈ ಕೆಳಗಿನ ಶ್ಲೋಕದಲ್ಲಿ **ಯೋಗಾತ್ಮ**, **ಯೋಗೇಶ್ವರ**, **ಯೋಗೀಶ್ವರ** ಎಂದು ಸ್ತುತಿಸಿದೆ.

**ಯಂ ವಿನಿದ್ರಾ ಜಿತಶ್ವಾಸಾಃ ಸತ್ತ್ವಸ್ಥಾಃ ಸಂಯತೇಂದ್ರಿಯಾಃ।**
**ಜ್ಯೋತಿಃ ಪಶ್ಯಂತಿ ಯುಂಜಾನಾಃ ತಸ್ಮೈ ಯೋಗಾತ್ಮನೇ ನಮಃ॥**

*ಮಹಾಯೋಗಿಗಳು ನಿದ್ರೆಯನ್ನು ಗೆದ್ದು, ಪ್ರಾಣವನ್ನೂ ಸ್ವಾಧೀನಮಾಡಿ ಕೊಂಡು, ಸತ್ತ್ವಗುಣಸಂಪನ್ನರಾಗಿ, ಇಂದ್ರಿಯನಿಗ್ರಹವನ್ನೂ ಉಳ್ಳವರಾಗಿ ಯಾವ ಸ್ವಯಂಜ್ಯೋತಿಸ್ತತ್ತ್ವವನ್ನು ತಮ್ಮೊಳಗೇ ಕಾಣುತ್ತಾರೆಯೋ, ಅಂಥ ಯೋಗಾತ್ಮನಾದ ಯೋಗೀಶ್ವರನಾದ ಶ್ರೀಕೃಷ್ಣನಿಗೆ ನಮಸ್ಕಾರ.*

ಯೋಗಿಗಳು, ತಪಸ್ವಿಗಳು, ಮಹರ್ಷಿಗಳು ಏಕಾಂತವಾಸಮಾಡುತ್ತಾ, ನಿದ್ರಾ ಆಹಾರಗಳನ್ನು ತ್ಯಜಿಸಿ, ನೈಷ್ಠಿಕ ಬ್ರಹ್ಮಚರ್ಯವ್ರತವನ್ನು ಪಾಲಿಸುತ್ತಾ, ಅಂತರ್ಮುಖಿಗಳೂ ಆಗಿ, ಏಕಾಗ್ರತೆಯಿಂದ ಧ್ಯಾನವನ್ನು ಮಾಡುತ್ತಾ ಯಾವ ಅಂತರ್ಜ್ಯೋತಿಯನ್ನು ತಮ್ಮೊಳಗೇ ಕಾಣುತ್ತಾರೆಯೋ, ಅಂಥ ಶ್ರೀಕೃಷ್ಣನಿಗೆ ನಮಸ್ಕಾರ. ಶ್ರೀಕೃಷ್ಣನು ಅಂತರ್ಮುಖಿಗಳಾದ ಯೋಗಿಗಳಿಗೆ ಮಾತ್ರ ಸುಲಭಾ ರಾಧ್ಯನು; ಬಹಿರ್ಮುಖಿಗಳಿಗೆ ಅಂದರೆ ಬಾಹ್ಯವಿಷಯಗಳಲ್ಲಿಯೇ ಮುಳುಗಿರುವ ಲೌಕಿಕರಿಗಾಗಲೀ ಸಂಸಾರಿಜನಗಳಿಗಾಗಲೀ ಕೃಷ್ಣನು ಸುಲಭಾರಾಧ್ಯನಲ್ಲ.

ನೂರಾರು ವರ್ಷಗಳ ಕಾಲ ತಪಸ್ಸನ್ನು ಮಾಡುತ್ತಿರುವ ಮಹಾಯೋಗಿಗಳು ಯಾವ ಪರಮಾತ್ಮನನ್ನು ಕಾಣುತ್ತಾರೆಯೋ, ಅವನೇ ಶ್ರೀಕೃಷ್ಣನು. ಸಕಲ ಯೋಗ ಗಳಿಗೂ ಮೂಲಪುರುಷನೆಂದರೆ ಕೃಷ್ಣನೇ, ಯೋಗಿಗಳಿಗೆ ಯೋಗಾನುಷ್ಠಾನದ ಫಲವಾಗಿ ದೊರಕುವ ಪರಮಾತ್ಮನೆಂದರೆ ಕೃಷ್ಣನೇ. ನಿದ್ರೆಯೆಂಬುದು ಸಕಲ ಮಾನವರಿಗೂ ಅವಶ್ಯವಾಗಿ ಬೇಕಾಗಿರುವ ಆರೋಗ್ಯಸಂಪತ್ತು! ಇಂಥಾ ನಿದ್ರೆ ಯನ್ನು ಗೆಲ್ಲುವುದು ಸುಲಭವಲ್ಲ! ಆದರೆ ಭಗವಂತನ ಸಾಕ್ಷಾತ್ಕಾರಕ್ಕಾಗಿ ಯೋಗಿ ಗಳು ನಿದ್ರೆಯನ್ನು ಗೆದ್ದಿರುತ್ತಾರೆ. ಹೀಗೆ ಹೇಳಿರುವವರು ಯಾರೋ ಸಾಮಾನ್ಯ ರಾದ ಕವಿಗಳಲ್ಲ, ಪಂಡಿತರೂ ಅಲ್ಲ; ಮತ್ತೇನೆಂದರೆ ಭಾಗವತೋತ್ತಮರೂ ಸಕಲಾಗಮಾಭಿಜ್ಞರೂ, ಮಹಾತಪಸ್ವಿಗಳೂ ಆದ ಭೀಷ್ಮಪಿತಾಮಹರು. ಭೀಷ್ಮಾಚಾರ್ಯರು ನೈಷ್ಠಿಕಬ್ರಹ್ಮಚಾರಿಗಳೂ ಆದ ಮಹಾಯೋಗಿಗಳೂ ಹೌದು.

**ಯೋಗಾಚಾರ್ಯನೆಂದೂ ಕೃಷ್ಣನನ್ನು ಪೂಜಿಸಬೇಕು**

## 19. ಭೀಷ್ಮಸ್ತವರಾಜದಲ್ಲಿ ಮೂವತ್ತು ಸ್ತುತಿಗಳು

| | | | |
|---|---|---|---|
| ೧. | ತಸ್ಮೈ ಸೂರ್ಯಾತ್ಮನೇ ನಮಃ | = | ಸೂರ್ಯಾತ್ಮನಿಗೆ ನಮಸ್ಕಾರ |
| ೨. | ತಸ್ಮೈ ಸೋಮಾತ್ಮನೇ ನಮಃ | = | ಚಂದ್ರಸ್ವರೂಪಿಗೆ ನಮಸ್ಕಾರ |
| ೩. | ತಸ್ಮೈ ಜ್ಞೇಯಾತ್ಮನೇ ನಮಃ | = | ವೇದವೇದ್ಯನಿಗೆ ನಮಸ್ಕಾರ |
| ೪. | ತಸ್ಮೈ ವೇದಾತ್ಮನೇ ನಮಃ | = | ವೇದಸ್ವರೂಪಿಗೆ ನಮಸ್ಕಾರ |
| ೫. | ತಸ್ಮೈ ಯಜ್ಞಾತ್ಮನೇ ನಮಃ | = | ಯಜ್ಞಸ್ವರೂಪನಿಗೆ ನಮಸ್ಕಾರ |
| ೬. | ತಸ್ಮೈ ಹೋಮಾತ್ಮನೇ ನಮಃ | = | ಹೋಮಸ್ವರೂಪನಿಗೆ ನಮಸ್ಕಾರ |
| ೭. | ತಸ್ಮೈ ಸ್ತೋತ್ರಾತ್ಮನೇ ನಮಃ | = | ಸ್ತುತಿಸ್ವರೂಪನಿಗೆ ನಮಸ್ಕಾರ |
| ೮. | ತಸ್ಮೈ ತಾರ್ಕ್ಷ್ಯಾತ್ಮನೇ ನಮಃ | = | ಗರುಡಸ್ವರೂಪನಿಗೆ ನಮಸ್ಕಾರ |
| ೯. | ತಸ್ಮೈ ವಾಗಾತ್ಮನೇ ನಮಃ | = | ವಾಕ್‌ಸ್ವರೂಪನಿಗೆ ನಮಸ್ಕಾರ |
| ೧೦. | ತಸ್ಮೈ ವೀರ್ಯಾತ್ಮನೇ ನಮಃ | = | ವೀರ್ಯಸ್ವರೂಪನಿಗೆ ನಮಸ್ಕಾರ |
| ೧೧. | ತಸ್ಮೈ ನಿದ್ರಾತ್ಮನೇ ನಮಃ | = | ನಿದ್ರಾಸ್ವರೂಪನಿಗೆ ನಮಸ್ಕಾರ |
| ೧೨. | ತಸ್ಮೈ ಸತ್ಯಾತ್ಮನೇ ನಮಃ | = | ಸತ್ಯಸ್ವರೂಪನಿಗೆ ನಮಸ್ಕಾರ |
| ೧೩. | ತಸ್ಮೈ ಧರ್ಮಾತ್ಮನೇ ನಮಃ | = | ಧರ್ಮಸ್ವರೂಪನಿಗೆ ನಮಸ್ಕಾರ |
| ೧೪. | ತಸ್ಮೈ ಕಾಮಾತ್ಮನೇ ನಮಃ | = | ಕಾಮಸ್ವರೂಪನಿಗೆ ನಮಸ್ಕಾರ |
| ೧೫. | ತಸ್ಮೈ ಕ್ಷೇತ್ರಾತ್ಮನೇ ನಮಃ | = | ಕ್ಷೇತ್ರಸ್ವರೂಪನಿಗೆ ನಮಸ್ಕಾರ |
| ೧೬. | ತಸ್ಮೈ ಸಾಂಖ್ಯಾತ್ಮನೇ ನಮಃ | = | ಸಾಂಖ್ಯಸ್ವರೂಪನಿಗೆ ನಮಸ್ಕಾರ |
| ೧೭. | ತಸ್ಮೈ ಯೋಗಾತ್ಮನೇ ನಮಃ | = | ಯೋಗಾತ್ಮನಿಗೆ ನಮಸ್ಕಾರ |
| ೧೮. | ತಸ್ಮೈ ಮೋಕ್ಷಾತ್ಮನೇ ನಮಃ | = | ಮೋಕ್ಷಸ್ವರೂಪನಿಗೆ ನಮಸ್ಕಾರ |
| ೧೯. | ತಸ್ಮೈ ಘೋರಾತ್ಮನೇ ನಮಃ | = | ಘೋರಸ್ವರೂಪನಿಗೆ ನಮಸ್ಕಾರ |
| ೨೦. | ತಸ್ಮೈ ಮಾಯಾತ್ಮನೇ ನಮಃ | = | ಮಾಯಾಸ್ವರೂಪನಿಗೆ ನಮಸ್ಕಾರ |
| ೨೧. | ತಸ್ಮೈ ಪದ್ಮಾತ್ಮನೇ ನಮಃ | = | ಪದ್ಮಸ್ವರೂಪನಿಗೆ ನಮಸ್ಕಾರ |
| ೨೨. | ತಸ್ಮೈ ಯೋಗನಿದ್ರಾತ್ಮನೇ ನಮಃ | = | ಯೋಗನಿದ್ರಾಸ್ವರೂಪನಿಗೆ ನಮಸ್ಕಾರ |
| ೨೩. | ತಸ್ಮೈ ತೋಯಾತ್ಮನೇ ನಮಃ | = | ಜಲಸ್ವರೂಪನಿಗೆ ನಮಸ್ಕಾರ |
| ೨೪. | ತಸ್ಮೈ ಹೇತ್ವಾತ್ಮನೇ ನಮಃ | = | ಕಾರಣಸ್ವರೂಪನಿಗೆ ನಮಸ್ಕಾರ |
| ೨೫. | ತಸ್ಮೈ ದ್ರಷ್ಟ್ರಾತ್ಮನೇ ನಮಃ | = | ಸಾಕ್ಷಿಸ್ವರೂಪನಿಗೆ ನಮಸ್ಕಾರ |
| ೨೬. | ತಸ್ಮೈ ಕಾಲಾತ್ಮನೇ ನಮಃ | = | ಕಾಲಸ್ವರೂಪನಿಗೆ ನಮಸ್ಕಾರ |
| ೨೭. | ತಸ್ಮೈ ಲೋಕಾತ್ಮನೇ ನಮಃ | = | ಲೋಕಸ್ವರೂಪನಿಗೆ ನಮಸ್ಕಾರ |
| ೨೮. | ತಸ್ಮೈ ವಿಶ್ವಾತ್ಮನೇ ನಮಃ | = | ವಿಶ್ವಾತ್ಮನಿಗೆ ನಮಸ್ಕಾರ |
| ೨೯. | ತಸ್ಮೈ ಪ್ರಾಣಾತ್ಮನೇ ನಮಃ | = | ಪ್ರಾಣಸ್ವರೂಪನಿಗೆ ನಮಸ್ಕಾರ |
| ೩೦. | ತಸ್ಮೈ ಸರ್ವಾತ್ಮನೇ ನಮಃ | = | ಸರ್ವಸ್ವರೂಪನಿಗೆ ನಮಸ್ಕಾರ |

# 20. ಶ್ರೀಕೃಷ್ಣ ಎಂದರೆ ಜಗತ್ತಿಗೇ ತಂದೆ

ಒಬ್ಬ ವ್ಯಕ್ತಿಯ ಸ್ವರೂಪವನ್ನು ಬೇರೆಬೇರೆಯವರು ವರ್ಣಿಸುವುದಕ್ಕಿಂತ ಆ ವ್ಯಕ್ತಿಯೇ ಬಾಯಿಬಿಟ್ಟು 'ನಾನು ಇಂಥವನು, ನಾನು ಈ ಸ್ವಭಾವದವನು' ಎಂದು ತಾನೇ ಹೇಳಿದಾಗ ಅದಕ್ಕೆ ಬೆಲೆಯು ಬರುತ್ತದೆಯಲ್ಲವೇ? ಹಾಗೆಯೇ ಶ್ರೀಕೃಷ್ಣನನ್ನು ಅವರು ಇವರು ವರ್ಣಿಸುವುದಕ್ಕಿಂತಲೂ ಶ್ರೀಕೃಷ್ಣನೇ ತನ್ನನ್ನು ವರ್ಣಿಸಿರುವುದಕ್ಕೆ ಹೆಚ್ಚಿನ ಮಹತ್ತ್ವವಿರುತ್ತದೆ. ಭಗವದ್ಗೀತೆಯಲ್ಲಿ (೯-೧೭) ಶ್ರೀಕೃಷ್ಣನು ತಾನೇ ತನ್ನನ್ನು ಹೀಗೆ ವರ್ಣಿಸಿಕೊಂಡಿರುತ್ತಾನೆ:

**ಪಿತಾಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ।**
**ವೇದ್ಯಂ ಪವಿತ್ರಮೋಂಕಾರಃ ಋಕ್ ಸಾಮ ಯಜುರೇವ ಚ॥**

*ಅರ್ಜುನನೇ, ಈ ಜಗತ್ತಿಗೆ ತಂದೆಯು ನಾನೇ, ತಾಯಿಯೂ ನಾನೇ, ಪೋಷಕನೂ ನಾನೇ, ಪಿತಾಮಹನೂ ನಾನೇ ಆಗಿರುತ್ತೇನೆ; ಸಕಲಶಾಸ್ತ್ರಗಳಿಂದ ವೇದ್ಯತತ್ತ್ವವೂ ನಾನೇ, ಸಕಲ ವೇದಗಳ ಸಾರವಾದ ಓಂಕಾರವೂ ನಾನೇ; ಋಗ್ವೇದ, ಸಾಮವೇದ, ಯಜುರ್ವೇದಗಳೂ ನಾನೇ ಆಗಿದ್ದೇನೆ.*

**ಅಸ್ಯ ಜಗತಃ ಪಿತಾ ಅಹಮ್:** ಈ ಸಮಸ್ತ ಜಗತ್ತಿಗೂ ನಾನೇ ತಂದೆ. ನನ್ನಿಂದಲೇ ಈ ಜಗತ್ತು ಹುಟ್ಟಿರುತ್ತದೆ.

**ಅಸ್ಯ ಜಗತಃ ಮಾತಾ ಅಹಮ್:** ಈ ಸಮಸ್ತ ವಿಶ್ವಕ್ಕೂ ನಾನೇ ತಾಯಿಯೂ ಆಗಿರುತ್ತೇನೆ. ನಾನೇ ಈ ಜಗತ್ತಿಗೆ ಉಪಾದಾನಕಾರಣ.

**ಅಸ್ಯ ಜಗತಃ ಅಹಮೇವ ಪಿತಾಮಹಃ:** ಈ ಜಗತ್ತಿಗೆಲ್ಲ ನಾನೇ ಪಿತಾಮಹನೂ ಎಂದರೆ ಅಜ್ಜನೂ ಎಂದರೆ ಮೂಲಪುರುಷನೂ ಆಗಿದ್ದೇನೆ. ನಾನೇ ಜಗತ್ತಿಗೆಲ್ಲ ಮೂಲಪುರುಷನಾಗಿದ್ದೇನೆ.

**ವೇದ್ಯಮಪಿ ಅಹಮೇವ:** ಸಕಲ ವೇದಾಗಮಶಾಸ್ತ್ರಗಳಿಂದಲೂ ತಿಳಿಯಲ್ಪಡಬೇಕಾದ ಪರಬ್ರಹ್ಮತತ್ತ್ವವೂ ನಾನೇ ಆಗಿರುತ್ತೇನೆ.

**ಪವಿತ್ರಮ್ ಓಂಕಾರಃ ಅಹಮೇವ:** ಪವಿತ್ರವೂ ಮಂಗಳವೂ ಆದ ಪ್ರಣವವೆಂಬ ಓಂಕಾರವೂ ನಾನೇ ಆಗಿದ್ದೇನೆ.

**ಅಹಮೇವ ಋಕ್, ಸಾಮ, ಯಜುರೇವ ಚ:** ನಾನೇ ಋಗ್ವೇದ, ಯಜುರ್ವೇದ, ಸಾಮವೇದಗಳೂ ಆಗಿರುತ್ತೇನೆ.

ಅನಾದಿಯಾದ ವೇದಗಳೂ ಕೃಷ್ಣನೇ, ವೇದಗಳಲ್ಲಿ ಪ್ರತಿಪಾದ್ಯವಾದ ಪರಬ್ರಹ್ಮವೂ ಶ್ರೀಕೃಷ್ಣನೇ ಆಗಿದ್ದಾನೆ.

### ಶ್ರೀಕೃಷ್ಣನನ್ನೇ ತಾಯಿತಂದೆಯರೆಂದು ತಿಳಿಯಬೇಕು

## 21. ಶ್ರೀಕೃಷ್ಣಾಷ್ಟಕಮ್

ವಸುದೇವಸುತಂ ದೇವಂ ಕಂಸಚಾಣೂರಮರ್ದನಮ್ ।
ದೇವಕೀಪರಮಾನಂದಂ **ಕೃಷ್ಣಂ ವಂದೇ ಜಗದ್ಗುರುಮ್** ॥ ೧ ॥

ಅತಸೀಪುಷ್ಪಸಂಕಾಶಂ ಹಾರನೂಪುರಶೋಭಿತಮ್ ।
ರತ್ನಕಂಕಣಕೇಯೂರಂ **ಕೃಷ್ಣಂ ವಂದೇ ಜಗದ್ಗುರುಮ್** ॥ ೨ ॥

ಕುಟಿಲಾಲಕಸಂಯುಕ್ತಂ ಪೂರ್ಣಚಂದ್ರನಿಭಾನನಮ್ ।
ವಿಲಸತ್ಕುಂಡಲಧರಂ **ಕೃಷ್ಣಂ ವಂದೇ ಜಗದ್ಗುರುಮ್** ॥ ೩ ॥

ಮಂದಾರಗಂಧಸಂಯುಕ್ತಂ ಚಾರುಹಾಸಂ ಚತುರ್ಭುಜಮ್ ।
ಬರ್ಹಿಪಿಂಛಾವಚೂಡಾಂಗಂ **ಕೃಷ್ಣಂ ವಂದೇ ಜಗದ್ಗುರುಮ್** ॥ ೪

ಉತ್ಫುಲ್ಲಪದ್ಮಪತ್ರಾಕ್ಷಂ ನೀಲಜೀಮೂತಸನ್ನಿಭಮ್ ।
ಯಾದವಾನಾಂ ಶಿರೋರತ್ನಂ **ಕೃಷ್ಣಂ ವಂದೇ ಜಗದ್ಗುರುಮ್** ॥ ೫

ರುಕ್ಮಿಣೀಕೇಲಿಸಂಯುಕ್ತಂ ಪೀತಾಂಬರಸುಶೋಭಿತಮ್ ।
ಅವಾಪ್ತತುಲಸೀಗಂಧಂ **ಕೃಷ್ಣಂ ವಂದೇ ಜಗದ್ಗುರುಮ್** ॥ ೬ ॥

ಗೋಪಿಕಾನಾಂ ಕುಚದ್ವಂದ್ವಕುಂಕುಮಾಂಕಿತವಕ್ಷಸಮ್ ।
ಶ್ರೀನಿಕೇತಂ ಮಹೇಷ್ವಾಸಂ **ಕೃಷ್ಣಂ ವಂದೇ ಜಗದ್ಗುರುಮ್** ॥ ೭ ॥

ಶ್ರೀವತ್ಸಾಂಕಂ ಮಹೋರಸ್ಕಂ ವನಮಾಲಾವಿರಾಜಿತಮ್ ।
ಶಂಖಚಕ್ರಧರಂ ದೇವಂ **ಕೃಷ್ಣಂ ವಂದೇ ಜಗದ್ಗುರುಮ್** ॥ ೮ ॥

ಕೃಷ್ಣಾಷ್ಟಕಮಿದಂ ಪುಣ್ಯಂ ಪ್ರಾತರುತ್ಥಾಯ ಯಃ ಪಠೇತ್ ।
ಕೋಟಿಜನ್ಮಕೃತಂ ಪಾಪಂ ಸ್ಮರಣಾತ್ ತಸ್ಯ ನಶ್ಯತಿ ॥

**ಇತಿ ಶ್ರೀಶಂಕರಾಚಾರ್ಯಕೃತಂ ಶ್ರೀಕೃಷ್ಣಾಷ್ಟಕಂ ಸಮಾಪ್ತಮ್**

## 22. ಶ್ರೀಕೃಷ್ಣದ್ವಾದಶನಾಮಾವಳಿ ಸ್ತೋತ್ರಮ್

ಪ್ರಣಮ್ಯ ಸಚ್ಚಿದಾನಂದಂ ನಿರ್ವಿಕಾರಂ ನಿರಂಜನಮ್ ।
ನಿತ್ಯಶುದ್ಧಂ ನಿತ್ಯಬುದ್ಧಂ ನಾಮರೂಪವಿವರ್ಜಿತಮ್ ॥

ಪ್ರಣಮ್ಯ ವಾಸುದೇವಂ ಚ ಭಕ್ತಾನಾಂ ಜ್ಞಾನಬೋಧಕಮ್ ।
ಪಠೇತ್ ಪ್ರತಿದಿನಂ ಭಕ್ತ್ಯಾ **ಶ್ರೀಕೃಷ್ಣಸ್ಯ** ಪರಾತ್ಮನಃ ॥

ದ್ವಾದಶೈತಾನಿ ನಾಮಾನಿ ಸರ್ವಸೌಭಾಗ್ಯಸಿದ್ಧಯೇ ।
ಬ್ರಹ್ಮಾತ್ಮಜ್ಞಾನಸಿದ್ಧ್ಯರ್ಥಂ ಮೋಕ್ಷಾನಂದಪ್ರಸಿದ್ಧಯೇ ॥

ಪ್ರಥಮಂ **ವಾಸುದೇವಂ** ಚ ದ್ವಿತೀಯಂ ತು **ಜನಾರ್ದನಮ್** ।
ತೃತೀಯಂ ಚ **ಹೃಷೀಕೇಶಂ ಮಾಧವಂ** ತು ಚತುರ್ಥಕಮ್ ॥

**ಶ್ರೀಕೃಷ್ಣಂ** ಪಂಚಮಂ ಚೈವ **ಅಚ್ಯುತಂ** ಷಷ್ಠಮೇವ ಚ ।
**ಗೋವಿಂದಂ** ಸಪ್ತಮಂ ಚೈವ **ವಾರ್ಷ್ಣೇಯಮ**ಷ್ಟಕಂ ತಥಾ ॥

**ಗೋಪಾಲಂ** ನವಮಂ ಚೈವ **ಕೇಶವಂ** ದಶಮಂ ತಥಾ ।
ಏಕಾದಶಂ **ವಿಶ್ವರೂಪಂ** ದ್ವಾದಶಂ **ಪುರುಷೋತ್ತಮಮ್** ॥

ದ್ವಾದಶೈತಾನಿ ನಾಮಾನಿ **ಶ್ರೀಕೃಷ್ಣಸ್ಯ** ಮಹಾತ್ಮನಃ ।
ಸಾಯಂ ಪ್ರಾತಃ ಪಠೇದ್ಯಸ್ತು ಶ್ರದ್ಧಾಭಕ್ತಿಸಮನ್ವಿತಃ ॥

ಆಯುರಾರೋಗ್ಯಮೈಶ್ವರ್ಯಂ ವಿದ್ಯಾಂ ಬುದ್ಧಿಂ ಯಶೋ ಧನಮ್ ।
ನಿತ್ಯತೃಪ್ತಿಂ ನಿತ್ಯಶಾಂತಿಂ ನಿತ್ಯಾನಂದಂ ಪರಂ ಸುಖಮ್ ॥

ಲಭತೇ ಸಕಲಾನ್ ಕಾಮಾನ್ ಪುತ್ರಪೌತ್ರಾದಿಸಂಪದಃ ।
ಆತ್ಮಜ್ಞಾನಂ ತಥಾ ಮೋಕ್ಷಂ ಶ್ರೀಕೃಷ್ಣಸ್ಯ ಪ್ರಸಾದತಃ ॥

ವಸುದೇವಸುತಂ ದೇವಂ ಕಂಸಚಾಣೂರಮರ್ದನಮ್ ।
ದೇವಕೀಪರಮಾನಂದಂ ಕೃಷ್ಣಂ ವಂದೇ ಜಗದ್ಗುರುಮ್ ॥

ಅಚ್ಯುತಾನಂತ ಗೋವಿಂದ ಮಾಧವಾನಂತ ಕೇಶವ ।
ಕೃಷ್ಣ ವಿಷ್ಣೋ ಹೃಷೀಕೇಶ ವಾಸುದೇವ ನಮೋಽಸ್ತು ತೇ ॥

ಕೃಷ್ಣಾಯ ವಾಸುದೇವಾಯ ದೇವಕೀನಂದನಾಯ ಚ ।
ನಂದಗೋಪಕುಮಾರಾಯ ಗೋವಿಂದಾಯ ನಮೋ ನಮಃ ॥

# 23. ಶ್ರೀಕೃಷ್ಣನು ಲೀಲಾವತಾರಿ

ಭಗವಂತನ ಎಂಟನೆಯ ಅವತಾರಿಯಾದ ಶ್ರೀಕೃಷ್ಣನು ಪೂರ್ಣಾವತಾರಿಯೂ ಹೌದು, ಲೀಲಾವತಾರಿಯೂ ಹೌದು. ಮಾಯಾವತಾರಿಯೂ ಹೌದು. ಲೀಲೆಗಳನ್ನು ಜಗತ್ತಿಗೆ ತೋರಿಸುತ್ತಾ ಲೀಲೆಗಳಿಂದಲೇ ಜೀವನವನ್ನು ಸಾಗಿಸುತ್ತಾ, ಲೀಲೆಗಳ ಮೂಲಕವೇ ಉಪದೇಶಗಳನ್ನೂ ಮಾಡುತ್ತಾ, ಲೀಲೆಯಿಂದಲೇ ಅವತಾರವನ್ನೂ ಸಂಪನ್ನಗೊಳಿಸಿದ ಶ್ರೀಕೃಷ್ಣನು **ಲೀಲಾವತಾರಿ** ಎಂದು ಕರೆಯಲ್ಪಡುತ್ತಾನೆ. 'ಲೀಲೆ' ಎಂದರೇನು? ಎಂದರೆ, 'ನಾಟಕ' ಎಂದರ್ಥ. ಇದೆಲ್ಲವೂ ಮಿಥ್ಯಾ ಎಂದು ತಿಳಿದಿದ್ದರೂ, ಇದಾವುದೂ ನನಗೆ ಸಂಬಂಧಪಟ್ಟಿಲ್ಲ ಎಂಬುದು ತನಗೆ ಗೊತ್ತಿದ್ದರೂ, ಇದಾವುದೂ ನನ್ನ ನಿಜ ಸ್ವರೂಪವಲ್ಲ ಎಂದು ತಿಳಿದಿದ್ದರೂ ಲೋಕಕಲ್ಯಾಣಕ್ಕಾಗಿ ನಿರಾಯಾಸದಿಂದ ತೋರಿಸುವ ಆಟಗಳನ್ನು ನಾವುಗಳು 'ಮಾಯಾಲೀಲೆಗಳು' ಎಂದು ಕರೆಯುತ್ತೇವೆ.

ಈ ಲೀಲೆಗಳಿಂದ ಭಗವಂತನಾದ ಶ್ರೀಕೃಷ್ಣನಿಗೆ ಆಗಬೇಕಾದದ್ದಾಗಲೀ ಹೋಗಬೇಕಾದದ್ದಾಗಲೀ ಏನೂ ಇಲ್ಲ. ಇದರಿಂದ ತನಗೆ ಏನೇನೂ ಪ್ರಯೋಜನವಿಲ್ಲವಾದರೂ ಜಗತ್ಕಲ್ಯಾಣಕ್ಕಾಗಿ ಮಾಡಿರುವ ನಾಟಕಗಳೆಲ್ಲವೂ ಶ್ರೀಕೃಷ್ಣನ ಲೀಲೆಗಳೇ ಆಗಿರುತ್ತವೆ. ಆದ್ದರಿಂದ ಶ್ರೀಕೃಷ್ಣಪರಮಾತ್ಮನ ಲೀಲೆಗಳನ್ನು ಸಾಮಾನ್ಯರು ಅರ್ಥಮಾಡಿಕೊಳ್ಳಲಾರರು. ಏಕೆಂದರೆ ಇವರಿಗೆ ಆ ಯೋಗ್ಯತೆಯು ಇಲ್ಲ. ಆದ್ದರಿಂದ ಮಹಾತ್ಮರುಗಳು, ಜ್ಞಾನಿಪುಂಗವರುಗಳು ಶ್ರೀಕೃಷ್ಣಪರಮಾತ್ಮನ ಲೀಲೆಗಳ ರಹಸ್ಯಾರ್ಥಗಳನ್ನು ಚೆನ್ನಾಗಿ ಬಲ್ಲವರಾಗಿರುತ್ತಾರೆ.

ಮೂಢರಿಗೆ ಶ್ರೀಕೃಷ್ಣನ ಪರಮಾರ್ಥ ಸ್ವರೂಪವು ತಿಳಿಯುವುದಿಲ್ಲ. ಇದನ್ನೇ ಶ್ರೀಕೃಷ್ಣನು ಗೀತೆಯಲ್ಲಿ (೭-೨೫) ಹೀಗೆ ಹೇಳಿದ್ದಾನೆ:

**ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ।**
**ಮೂಢೋಽಯಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್**
**(ಲೋಕೋ ಮಾಮಜಮವ್ಯಯಮ್)॥**

*ಯೋಗಮಾಯೆಯಿಂದ ಮುಚ್ಚಲ್ಪಟ್ಟವನಾಗಿ ನಾನು, ಅರ್ಜುನನೇ, ಎಲ್ಲರಿಗೂ ಅರ್ಥವಾಗುವುದಿಲ್ಲ. ಈ ಗುಣಗಳಿಗಿಂತ, ಮಾಯೆಗಿಂತಲೂ ಮೇಲಿರುವಂಥ ಪರಮನೂ ಅವ್ಯಯನೂ ಆದ ನನ್ನನ್ನು ಈ ಮೂಢರು ಅರಿಯಲಾರರು.*

ಆದ್ದರಿಂದ ಲೀಲಾವತಾರಿಯಾದ ಶ್ರೀಕೃಷ್ಣನ ನಡತೆಯನ್ನೂ ಜೀವನ ಕ್ರಮವನ್ನೂ ಸಾಮಾನ್ಯಲೌಕಿಕರು ಸುಲಭವಾಗಿ ಅರ್ಥಮಾಡಿಕೊಳ್ಳಲಾರರು.

**ಶ್ರೀಕೃಷ್ಣನ ಲೀಲೆಗಳನ್ನು ಅರ್ಥಮಾಡಿಕೊಂಡು ಆರಾಧಿಸಬೇಕು**

# 24. ಗೀತಾಚಾರ್ಯನಾಗಿ ಶ್ರೀಕೃಷ್ಣ

ಶ್ರೀಕೃಷ್ಣಾವತಾರವೇ ಒಂದು ಅದ್ಭುತಾವತಾರ, ಅಸಾಧಾರಣಾವತಾರ; ಶ್ರೀಕೃಷ್ಣನ ನಿತ್ಯಜೀವನವೇ ಒಂದು ಪವಾಡ. ಶ್ರೀಕೃಷ್ಣನನ್ನು ಭಕ್ತರು ನೂರಾರು ರೀತಿಯಿಂದ ಪೂಜಿಸುತ್ತಾರೆ. ಸಹಸ್ರಾರು ನಾಮರೂಪಗುಣಧರ್ಮಗಳಿಂದ ಶ್ರೀಕೃಷ್ಣನನ್ನು ಸಾಧುಸಂತರು, ಕವಿ ವಿದ್ವಾಂಸರು, ದಾಸರುಗಳು, ಭಾಗವತೋತ್ತಮರಾದ ಭಕ್ತರು ವರ್ಣಿಸಿರುತ್ತಾರೆ. ಇವೆಲ್ಲವೂ ಶ್ರೀಕೃಷ್ಣನಿಗೆ ಅನ್ವರ್ಥವಾಗಿರುತ್ತದೆ. ಏಕೆಂದರೆ ಶ್ರೀಕೃಷ್ಣನು ಲೀಲಾವತಾರಿಯಾಗಿದ್ದಾನೆ. ಭಗವಂತನ ಲೀಲೆಗಳಿಗೆ, ವಿಭೂತಿಗಳಿಗೆ 'ಇಂತಿಷ್ಟು' ಎಂಬುದೇ ಇಲ್ಲ.

ಇದಿಷ್ಟೂ ಸರಿ, ಆದರೆ ಶ್ರೀಕೃಷ್ಣನ ಇನ್ನೊಂದು ಅಸಾಧಾರಣ ಸ್ವರೂಪವಿದೆ. ಅದೇನೆಂದರೆ: "**ಗೀತಾಚಾರ್ಯನಾಗಿ ಶ್ರೀಕೃಷ್ಣ**". ಶ್ರೀಕೃಷ್ಣನು ಭಗವದ್ಗೀತೆಯನ್ನು ಅರ್ಜುನನಿಗೆ ಉಪದೇಶಿಸಿ, ಇಡೀ ಮಾನವಕುಲಕೋಟಿಯನ್ನೇ ಉದ್ಧಾರ ಮಾಡಿರುತ್ತಾನೆ. ಭಗವದ್ಗೀತೆಯೆಂಬ ಜ್ಞಾನಾಮೃತವನ್ನು ಮಾನವರಿಗೆ ಅನುಗ್ರಹ ಮಾಡಿ ಶ್ರೀಕೃಷ್ಣಪರಮಾತ್ಮನು ಗೀತಾಚಾರ್ಯನೂ ಆಗಿರುತ್ತಾನೆ. ಭಗವದ್ಗೀತೆಯು ಸಕಲ ವೇದಶಾಸ್ತ್ರಗಳ ಸಾರವಾಗಿದೆ. **ತದಿದಂ ಗೀತಾಶಾಸ್ತ್ರಂ ಸಮಸ್ತವೇದಾರ್ಥ ಸಾರಸಂಗ್ರಹಭೂತಮ್, ದುರ್ವಿಜ್ಞೇಯಾರ್ಥಮ್**; ಈ ಭಗವದ್ಗೀತಾಶಾಸ್ತ್ರವು ಸಮಸ್ತ ವೇದಾರ್ಥಗಳ ಸಾರಸಂಗ್ರಹವಾಗಿದೆ, ಇದರ ಅರ್ಥವು ಎಲ್ಲರಿಗೂ ಸುಲಭವಾಗಿ ತಿಳಿಯದು ಎಂದು ಶ್ರೀಶಂಕರಾಚಾರ್ಯರು ಬರೆದಿದ್ದಾರೆ.

ಗೀತೆಯಲ್ಲಿ "ಏನಿದೆ?" ಎಂಬ ಪ್ರಶ್ನೆಗೆ "ಏನಿಲ್ಲ?" ಎಂಬುದೇ ಉತ್ತರ. ಅಧ್ಯಾತ್ಮಸಾಧಕರಾದ ಮುಮುಕ್ಷುಗಳಿಗೆ ಭಗವದ್ಗೀತೆಯಲ್ಲಿ LKG ಪಾಠದಿಂದ ಪ್ರಾರಂಭಗೊಂಡು Ph.D. ವರೆಗಿನ ಪಾಠಗಳನ್ನು ಉಪದೇಶಿಸಿದೆ. ಇಡೀ ಭಾರತದೇಶದಲ್ಲಿ , ಏಕೆ? ಇಡೀ ವಿಶ್ವದಲ್ಲಿಯೇ ಸುಪ್ರಸಿದ್ಧವಾಗಿ ಜನಪ್ರಿಯವಾಗಿರುವ ಏಕೈಕ ವೇದಾಂತಗ್ರಂಥವೆಂದರೆ **ಭಗವದ್ಗೀತೆ** ಎಂದು ಧೈರ್ಯವಾಗಿ ಹೇಳಬಹುದು. **ಸಾಮಾನ್ಯ ಲೌಕಿಕಸಂಸಾರಿಗಳಿಂದ ಹಿಡಿದು ವಿರಕ್ತರಾದ ಸಂನ್ಯಾಸಿಗಳವರೆಗೆ ಎಲ್ಲರಿಗೂ ಅಧ್ಯಾತ್ಮ ಸಂದೇಶಗಳನ್ನು ಉಪದೇಶಿಸುತ್ತಿರುವ ಏಕಮೇವಾದ್ವಿತೀಯ ವೇದಾಂತಗ್ರಂಥವೆಂದರೆ, ಭಗವದ್ಗೀತೆ.** ಗೀತೆಯು ಸಕಲ ವೇದಗಳ, ವೇದಾಂತಗಳ ಸಾರಸಂಗ್ರಹವಾಗಿದೆ. ಹದಿನೆಂಟು ಅಧ್ಯಾಯಗಳಲ್ಲಿ ಹದಿನೆಂಟು **ಯೋಗ**ಗಳಿಂದ ಕೂಡಿಕೊಂಡು, ಸಾಧನ ಸಿದ್ಧಾಂತಗಳನ್ನು ಭಗವದ್ಗೀತೆಯು ತಿಳಿಸುತ್ತಿದೆ. **ಭಗವದ್ಗೀತಾಗ್ರಂಥವು ಸರ್ವಧರ್ಮಸಮನ್ವಯಗ್ರಂಥವೂ ಆಗಿರುತ್ತದೆ.** ಇಂಥ ಗೀತೆಯನ್ನು ಉಪದೇಶಿಸಿದ ಶ್ರೀಕೃಷ್ಣನು ಗೀತಾಚಾರ್ಯನಾಗಿ ಜಗದ್ಗುರುವೂ ಆಗಿರುತ್ತಾನೆ.

**ಭಗವದ್ಗೀತೆಯನ್ನು ಅಧ್ಯಯನಮಾಡುತ್ತಾ ಕೃಷ್ಣನನ್ನು ಪೂಜಿಸಬೇಕು**

# 25. ಜಗದ್ಗುರುವಾಗಿ ಶ್ರೀಕೃಷ್ಣ

ಭಗವಂತನ ಹತ್ತು ಅವತಾರಗಳನ್ನು ನಾವು ಭಕ್ತಿಯಿಂದ ಆರಾಧಿಸುತ್ತೇವೆ. ವರಾಹ, ನರಸಿಂಹ, ವಾಮನ, ಪರಶುರಾಮ ಮತ್ತು ಶ್ರೀರಾಮ—ಈ ಅವತಾರಗಳನ್ನು ನಾವು 'ಭಗವಂತ' ಎಂದೇ ಭಾವಿಸುತ್ತೇವೆ. ನರಸಿಂಹನನ್ನು ಭಗವಂತ ಎಂದು, ಶ್ರೀರಾಮನನ್ನೂ ಪರಮಾತ್ಮ ಎಂದೇ ಶ್ರದ್ಧಾಭಕ್ತಿಯಿಂದ ಪೂಜಿಸುತ್ತೇವೆ. ಈ ದೇವರುಗಳಿಗೆ ನೂರಾರು ಸ್ತೋತ್ರಗಳೂ, ಅಷ್ಟೋತ್ತರಶತ ನಾಮಗಳೂ, ಸಹಸ್ರನಾಮಗಳೂ ಇವೆ. ಈ ನಾಮಗಳಲ್ಲಿ ಆಯಾ ಅವತಾರದ ಗುಣಧರ್ಮನಾಮರೂಪಗಳನ್ನೆಲ್ಲ ವಿವರಿಸಿರುತ್ತಾರೆ.

ಇಷ್ಟೂ ಸತ್ಯ. ಆದರೆ ಶ್ರೀಕೃಷ್ಣಾವತಾರದಲ್ಲಿ ಶ್ರೀಕೃಷ್ಣನು ದೇವರೂ ಹೌದು, **ಜಗದ್ಗುರುವೂ ಹೌದು**! ಶ್ರೀಕೃಷ್ಣನನ್ನು ಪರಮಾತ್ಮ ಎಂದೂ; ಗುರು, ಸದ್ಗುರು, ಶ್ರೀಗುರು, ಜಗದ್ಗುರು ಎಂದೂ ನಾವುಗಳು ಆರಾಧಿಸುತ್ತೇವೆ. ಶ್ರೀಕೃಷ್ಣನು ವಸುದೇವದೇವಕಿಯರ ಪುತ್ರನಾಗಿ ಅವತರಿಸಿದರೂ ಅವನೇ ತನ್ನನ್ನು ಅಜನೆಂದೂ ಅವ್ಯಯಾತ್ಮನೆಂದೂ ಗೀತೆಯಲ್ಲಿ ಹೇಳಿಕೊಂಡಿದ್ದಾನೆ.

**ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ॥**

ಭಗವದ್ಗೀತಾ ೪-೬

ಎಂದು ಶ್ರೀಕೃಷ್ಣನೇ ಬಾಯಿಬಿಟ್ಟು ಹೇಳಿಕೊಂಡಿದ್ದಾನೆ. ಆದ್ದರಿಂದ ಶ್ರೀಕೃಷ್ಣನು ಭಗವಂತ ಎನ್ನುವುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

ಶ್ರೀಕೃಷ್ಣನು ಪರಮಾತ್ಮನೂ ಹೌದು, ಆದರೆ ಅಷ್ಟೇ ಅಲ್ಲ ; ಮತ್ತೇನೆಂದರೆ ಅವನು ಆಚಾರ್ಯನೂ ಹೌದು. **ವೇದಾಂತಕೃತ್ ವೇದವಿದೇವ ಚಾಽಹಂ** (೧೫-೧೫) ಎಂದೂ ಶ್ರೀಕೃಷ್ಣನೇ ಹೇಳಿದ್ದಾನೆ. ಇಡೀ ಜಗತ್ತಿಗೆ ಆತ್ಮತತ್ತ್ವವನ್ನು ಉಪದೇಶಿಸಿರುವುದರಿಂದಲೇ ಶ್ರೀಕೃಷ್ಣನು ಜಗದ್ಗುರುವೂ ಆಗಿರುತ್ತಾನೆ. ಆದ್ದರಿಂದಲೇ ಈ ಕೆಳಗಿನ ಶ್ಲೋಕದಲ್ಲಿ ಗೀತಾಚಾರ್ಯನಾದ ಕೃಷ್ಣನನ್ನು **ಜಗದ್ಗುರುಂ ವಂದೇ** ಎಂದು ಹೇಳಿದೆ:

**ವಸುದೇವಸುತಂ ದೇವಂ ಕಂಸಚಾಣೂರಮರ್ದನಮ್।**
**ದೇವಕೀಪರಮಾನಂದಂ "ಕೃಷ್ಣಂ ವಂದೇ ಜಗದ್ಗುರುಮ್"॥**

ಹೀಗೆ ಭಗವಂತನ ಇತರ ಉಳಿದ ಒಂಭತ್ತು ಅವತಾರಗಳಿಗಿಂತಲೂ ಶ್ರೀಕೃಷ್ಣಾವತಾರವು ವಿಶಿಷ್ಟವಾಗಿದೆ ಹಾಗೂ ಅಸಾಧಾರಣವಾಗಿರುತ್ತದೆ.

**ಜಗದ್ಗುರುವಾದ ಶ್ರೀಕೃಷ್ಣನನ್ನು ನಾವು ಆರಾಧಿಸೋಣ**

# 26. ಶ್ರೀಕೃಷ್ಣನ ಎಲ್ಲವೂ ಮಧುರ

ಶ್ರೀಕೃಷ್ಣಪರಮಾತ್ಮನು **ಪುಂಸಾಂ ಮೋಹನರೂಪಾಯ** ಎನ್ನುವಂತೆ ಅತ್ಯಂತ ಸುಂದರಮೂರ್ತಿ. ಶ್ರೀಕೃಷ್ಣನ ಮಾತು, ಕಣ್ಣು, ಕಿವಿ, ಮೂಗು, ಶರೀರ, ಕೈ ಕಾಲುಗಳು, ಮನಸ್ಸು, ಹೃದಯ, ನಡಿಗೆ, ನೃತ್ಯ, ರೂಪ, ತಿಲಕ, ಕೊಳಲು— ಎಲ್ಲವೂ ಮಧುರ!

ಈ ಕೆಳಗಿನ **ಮಧುರಾಷ್ಟಕ**ಸ್ತೋತ್ರದಲ್ಲಿ ವಲ್ಲಭಚೈತನ್ಯರು ಸುಂದರವಾಗಿ ಇದನ್ನೆಲ್ಲ ವರ್ಣಿಸಿದ್ದಾರೆ. ಪ್ರತಿಯೊಂದು ಶ್ಲೋಕದ ನಾಲ್ಕನೆಯ ಪಾದದಲ್ಲಿ **ಮಧುರಾಧಿಪತೇರಖಿಲಂ ಮಧುರಂ**—ಎಂದು ಹೇಳಿದೆ.

## ಮಧುರಾಷ್ಟಕಸ್ತೋತ್ರಮ್

ಅಧರಂ ಮಧುರಂ ವದನಂ ಮಧುರಂ
ನಯನಂ ಮಧುರಂ ಹಸಿತಂ ಮಧುರಮ್ ।
ಹೃದಯಂ ಮಧುರಂ ಗಮನಂ ಮಧುರಂ
ಮಧುರಾಧಿಪತೇರಖಿಲಂ ಮಧುರಮ್ ॥ ೧ ॥

ವಚನಂ ಮಧುರಂ ಚರಿತಂ ಮಧುರಂ
ವಸನಂ ಮಧುರಂ ವಲಿತಂ ಮಧುರಮ್ ।
ಚಲಿತಂ ಮಧುರಂ ಭ್ರಮಿತಂ ಮಧುರಂ
ಮಧುರಾಧಿಪತೇರಖಿಲಂ ಮಧುರಮ್ ॥ ೨ ॥

ವೇಣುರ್ಮಧುರೋ ರೇಣುರ್ಮಧುರಃ
ಪಾಣಿರ್ಮಧುರಃ ಪಾದೌ ಮಧುರೌ ।
ನೃತ್ಯಂ ಮಧುರಂ ಸಖ್ಯಂ ಮಧುರಂ
ಮಧುರಾಧಿಪತೇರಖಿಲಂ ಮಧುರಮ್ ॥ ೩ ॥

ಗೀತಂ ಮಧುರಂ ಪೀತಂ ಮಧುರಂ
ಭುಕ್ತಂ ಮಧುರಂ ಸುಪ್ತಂ ಮಧುರಮ್ ।
ರೂಪಂ ಮಧುರಂ ತಿಲಕಂ ಮಧುರಂ
ಮಧುರಾಧಿಪತೇರಖಿಲಂ ಮಧುರಮ್ ॥ ೪ ॥

ಕರಣಂ ಮಧುರಂ ಚರಣಂ ಮಧುರಂ
ಹರಣಂ ಮಧುರಂ ಸ್ಮರಣಂ ಮಧುರಮ್ ।
ವಮಿತಂ ಮಧುರಂ ಶಮಿತಂ ಮಧುರಂ
ಮಧುರಾಧಿಪತೇರಖಿಲಂ ಮಧುರಮ್ ॥ ೫ ॥

ಗುಂಜಾ ಮಧುರಾ ಮಾಲಾ ಮಧುರಾ
ಯಮುನಾ ಮಧುರಾ ವೀಚೀ ಮಧುರಾ ।
ಸಲಿಲಂ ಮಧುರಂ ಕಮಲಂ ಮಧುರಂ
ಮಧುರಾಧಿಪತೇರಖಿಲಂ ಮಧುರಮ್ ॥ ೬ ॥

ಗೋಪೀ ಮಧುರಾ ಲೀಲಾ ಮಧುರಾ
ಯುಕ್ತಂ ಮಧುರಂ ಭುಕ್ತಂ ಮಧುರಮ್ ।
ದೃಷ್ಟಂ ಮಧುರಂ ಶಿಷ್ಟಂ ಮಧುರಂ
ಮಧುರಾಧಿಪತೇರಖಿಲಂ ಮಧುರಮ್ ॥ ೭ ॥

ಗೋಪಾ ಮಧುರಾ ಗಾವೋ ಮಧುರಾಃ
ಯಷ್ಟಿರ್ಮಧುರಾ ಸೃಷ್ಟಿರ್ಮಧುರಾ ।
ದಲಿತಂ ಮಧುರಂ ಫಲಿತಂ ಮಧುರಂ
ಮಧುರಾಧಿಪತೇರಖಿಲಂ ಮಧುರಮ್ ॥ ೮ ॥

ಭಾವನಾಪ್ರಧಾನರಾದ ಭಕ್ತರು ಶ್ರೀಕೃಷ್ಣಪರಮಾತ್ಮನ ಸಕಲ ಅಂಗಾಂಗಗಳನ್ನೂ, ಕಾಯಿಕ ವಾಚಿಕ ಮಾನಸಿಕ ಭಾವನೆಗಳನ್ನೂ ಮಧುರ, ಮಧುರ, ಮಧುರ ಎಂದೇ ಭಾವಿಸುತ್ತಾರೆ. ಅಪ್ರಾಕೃತ ಹಾಗೂ ದಿವ್ಯ ಶರೀರಧಾರಿಯಾದ ಶ್ರೀಕೃಷ್ಣಭಗವಂತನನ್ನು ಸರ್ವಾಂಗಸುಂದರನೆಂದೂ ಸರ್ವಮಧುರನೆಂದೂ ನಿತ್ಯಾನಂದಸ್ವರೂಪನೆಂದೂ ಭಾವಿಸಬೇಕು.

**ಈ ಮಧುರಾಷ್ಟಕಸ್ತೋತ್ರವನ್ನು ಪ್ರತಿದಿನವೂ ಪಾರಾಯಣಮಾಡಬೇಕು**

## 27. ತದಾऽऽತ್ಮಾನಂ ಸೃಜಾಮ್ಯಹಮ್

ಶ್ರೀಕೃಷ್ಣನು ಭಗವಂತನ ಅವತಾರ. ಲೋಕಕಲ್ಯಾಣವನ್ನು ಮಾಡುವುದಕ್ಕಾಗಿ ಭಗವಂತನೇ ಶ್ರೀಕೃಷ್ಣನಾಗಿ ಅವತರಿಸಿದನು. ಧರ್ಮವು ಕ್ಷೀಣಿಸುತ್ತಾ ಅಧರ್ಮವು ಮೆರೆಯುತ್ತಿರುವಾಗ ಭಗವಂತನೇ ನಾನಾ ಅವತಾರಗಳನ್ನು ಎತ್ತುತ್ತಾನೆ ಎಂದು ಪುರಾಣಗಳು ಸಾರುತ್ತಿವೆ. ಭಗವದ್ಗೀತೆಯಲ್ಲಿಯೂ (೪-೭) ಹೀಗೆ ಹೇಳಿದೆ:

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ।**
**ಅಭ್ಯುತ್ಥಾನಮಧರ್ಮಸ್ಯ ತದಾऽऽತ್ಮಾನಂ ಸೃಜಾಮ್ಯಹಮ್॥**

*ಯಾವಾಗ ಧರ್ಮಕ್ಕೆ ಚ್ಯುತಿಯು ಉಂಟಾಗುತ್ತದೆಯೋ, ಮತ್ತು ಅಧರ್ಮವು ಹೆಚ್ಚಾಗುತ್ತಾ ಹೋಗುತ್ತದೆಯೋ, ಎಲೈ ಭರತನೇ, ಆಗ ನಾನು ಅನೇಕ ಅವತಾರಗಳ ಮೂಲಕ ಹುಟ್ಟುತ್ತೇನೆ.*

ಸರಿ, ಹಾಗಾದರೆ ಭಗವಂತನ ಅವತಾರದ ಉದ್ದೇಶವಾದರೂ ಏನು? ಎಂದರೆ, ದುಷ್ಟನಾಶ, ಶಿಷ್ಟಸಂರಕ್ಷಣೆ. ಇದನ್ನೇ ಭಗವಂತನು ಭಗವದ್ಗೀತೆಯಲ್ಲಿ ಹೀಗೆ ಹೇಳಿರುತ್ತಾನೆ:

**ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್।**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ॥**

ಭಗವದ್ಗೀತಾ ೪-೮

*ಸಾಧುಸಂತರನ್ನು ಕಾಪಾಡುವುದಕ್ಕಾಗಿಯೂ ಮತ್ತು ದುಷ್ಟರನ್ನು, ನೀಚರನ್ನು, ದುರಹಂಕಾರಿಗಳನ್ನು ನಾಶಮಾಡುವುದಕ್ಕಾಗಿಯೂ, ನಾನು, ಪ್ರತಿಯೊಂದು ಯುಗದಲ್ಲಿಯೂ ಅವತರಿಸುತ್ತೇನೆ.*

ಈ ಮಾತುಗಳು ಶ್ರೀಕೃಷ್ಣನ ಅವತಾರಕ್ಕೆ ಚೆನ್ನಾಗಿ ಹೊಂದುತ್ತದೆ. ಶ್ರೀಕೃಷ್ಣ ಪರಮಾತ್ಮನ ಜೀವನವು ಪ್ರಾರಂಭದಿಂದ ಕೊನೆಯವರೆಗೂ ಲೀಲಾರೂಪವಾಗಿದ್ದು, ದುಷ್ಟರ ಸಂಹಾರವನ್ನೂ, ಶಿಷ್ಟರ ರಕ್ಷಣೆಯನ್ನೂ ಮಾಡಿರುತ್ತದೆ. ಶಿಶುಪಾಲ, ಕಂಸ ಮುಂತಾದ ದುಷ್ಟರ ನಾಶವನ್ನೂ, ಭೀಷ್ಮ, ಧರ್ಮರಾಜ ಮುಂತಾದ ಧಾರ್ಮಿಕರ ಸಂರಕ್ಷಣೆಯನ್ನೂ ಶ್ರೀಕೃಷ್ಣಪರಮಾತ್ಮನು ಮಾಡಿರುತ್ತಾನೆ. ಏಕೆಂದರೆ ಭಗವಂತನೆಂದರೆ ಸತ್ಯಧರ್ಮಗಳ ಸಾಕಾರಮೂರ್ತಿ. ಸತ್ಯಧರ್ಮಗಳೆರಡೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಸತ್ಯಧರ್ಮಪಾಲನೆಯೇ ಅವತಾರದ ಉದ್ದೇಶ.

**ಧರ್ಮಪರಿಪಾಲಕನೆಂದು ಶ್ರೀಕೃಷ್ಣನನ್ನು ಪೂಜಿಸಬೇಕು**

## 28. ಮುಮುಕ್ಷುಗಳಿಗೆ ಶಂಕರರ ಕಿವಿಮಾತು

ಶ್ರೀಕೃಷ್ಣನು ತನ್ನ ಪ್ರಿಯಭಕ್ತನಾದ ಅರ್ಜುನನಿಗೆ ಆತ್ಮವಿದ್ಯೆಗೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನೂ ವಿಸ್ತಾರವಾಗಿ ತಿಳಿಸಿ, ಕಡೆಯಲ್ಲಿ ಈ ಮಾತುಗಳನ್ನು ಹೇಳಿದ್ದಾನೆ:

**ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ।**
**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್॥**

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ॥**

ಭಗವದ್ಗೀತಾ ೧೮-೬೪, ೬೫

*ಅತ್ಯಂತರಹಸ್ಯವೂ ಗುಹ್ಯವೂ ಆದ ಒಂದು ಒಳ್ಳೆಯ ಮಾತನ್ನು, ಅರ್ಜುನನೇ, ನಾನೀಗ ನಿನಗೆ ಹೇಳುತ್ತೇನೆ. ಏಕೆಂದರೆ ನೀನು ನನಗೆ ಅತ್ಯಂತ ಪ್ರಿಯನಾಗಿರುತ್ತೀಯೆ. ಆದ್ದರಿಂದ ನಾನು ನಿನಗೆ ಹಿತೋಪದೇಶವೊಂದನ್ನು ಮಾಡುತ್ತೇನೆ. ಅದನ್ನು ನೀನು ಏಕಾಗ್ರತೆಯಿಂದ ಕೇಳು, ಅರ್ಜುನ! ಅದೇನೆಂದರೆ: ನನ್ನಲ್ಲಿ ಮನಸ್ಸಿಡು, ನನ್ನನ್ನೇ ಭಜಿಸು, ನನಗಾಗಿಯೇ ಯಜ್ಞವನ್ನು ಮಾಡು, ನನ್ನನ್ನೇ ನಮಸ್ಕರಿಸುತ್ತಿರು; ನೀನು ಇಷ್ಟನ್ನು ಮಾಡುತ್ತಿದ್ದರೆ, ನೀನು ನನ್ನನ್ನೇ ಬಂದು ಸೇರುತ್ತೀಯೆ. ಇದು ಸತ್ಯ, ಪರಮಸತ್ಯ! ಹೀಗೆಂದು ನಾನು ಪ್ರತಿಜ್ಞೆಮಾಡಿ ಹೇಳುತ್ತಿದ್ದೇನೆ. ಏಕೆಂದರೆ, ಅರ್ಜುನನೇ, ನೀನು ನನಗೆ ಪ್ರಿಯನಾಗಿದ್ದೀಯೆ.*

ಇದಿಷ್ಟೂ ಗೀತಾಚಾರ್ಯನ ಮಾತುಗಳಾಯಿತು. ಈ ಶ್ಲೋಕಕ್ಕೆ ಭಾಷ್ಯವನ್ನು ಬರೆಯುತ್ತಾ, ಶ್ರೀಶಂಕರರು ಮುಮುಕ್ಷು ಸಾಧಕರುಗಳಿಗೆ ಈ ಕೆಳಗಿನ **ಕಿವಿಮಾತು**ಗಳನ್ನು ಬರೆದಿರುತ್ತಾರೆ:

**ಏವಂ ಭಗವತಃ ಸತ್ಯಪ್ರತಿಜ್ಞತ್ವಂ ಬುದ್ಧ್ವಾ, ಭಗವದ್ಭಕ್ತೇಃ ಅವಶ್ಯಂಭಾವಿ ಮೋಕ್ಷಫಲಮ್ ಅವಧಾರ್ಯ ಭಗವಚ್ಛರಣೈಕಪರಾಯಣೋ ಭವೇತ್ ಇತಿ ವಾಕ್ಯಾರ್ಥಃ।**

*ಇದು ಭಗವಂತನ ಪ್ರತಿಜ್ಞೆ, ಇದು ಸತ್ಯಪ್ರತಿಜ್ಞೆ ಎಂದು ತಿಳಿದು; 'ಭಗವದ್ಭಕ್ತಿಯಿಂದ ಮುಕ್ತಿ' ಎಂಬ ಫಲವು ಅವಶ್ಯವಾಗಿ ಉಂಟಾಗುತ್ತದೆ ಎಂದು ದೃಢನಿಶ್ಚಯವನ್ನು ಮಾಡಿಕೊಂಡು ಸಾಧಕನು ಭಗವಂತನಲ್ಲಿಯೇ ಸಂಪೂರ್ಣವಾಗಿ ಮನಸ್ಸನ್ನಿಟ್ಟು ಭಗವಂತನಿಗೇ ಸಂಪೂರ್ಣವಾಗಿ ಶರಣಾಗತನಾಗಬೇಕು ಎಂದು ಒಟ್ಟು ತಾತ್ಪರ್ಯಾರ್ಥವು.*

**'ಭಕ್ತಿಯಿಂದ ಮುಕ್ತಿ' ಎಂದು ತಿಳಿದು ಭಗವದ್ಭಕ್ತನಾಗಬೇಕು**

# 29. "ಕೃಷ್ಣಂ ವಂದೇ ಜಗದ್ಗುರುಮ್" ಅಷ್ಟಕಂ

ಪ್ರಣಮ್ಯ ಸಚ್ಚಿದಾನಂದಂ ವಾಸುದೇವಂ ಜಗದ್ಗುರುಮ್।
ಅಜಮನಿದ್ರಮಸ್ವಪ್ನಮ್ ಅನಾಮಕಮರೂಪಕಮ್॥

ಪಠೇತ್ ಪ್ರತಿದಿನಂ ಭಕ್ತ್ಯಾ **ಶ್ರೀಕೃಷ್ಣಸ್ಯಾಷ್ಟಕಂ ಪರಮ್**।
ಮೋಕ್ಷದಂ ಜ್ಞಾನದಂ ಶುದ್ಧಂ ಸರ್ವಸಂಪತ್ಕರಂ ಶುಭಮ್॥

ವಸುದೇವಸುತಂ ದೇವಂ ಕಂಸಚಾಣೂರಮರ್ದನಮ್।
ದೇವಕೀಪರಮಾನಂದಂ **ಕೃಷ್ಣಂ ವಂದೇ ಜಗದ್ಗುರುಮ್** ॥ ೧ ॥

ಗೀತಾಚಾರ್ಯಂ ತಪೋಮೂರ್ತಿಂ ಲೀಲಾಮಾನುಷವಿಗ್ರಹಮ್।
ಭಕ್ತಾನಾಂ ಜ್ಞಾನದಾತಾರಂ **ಕೃಷ್ಣಂ ವಂದೇ ಜಗದ್ಗುರುಮ್** ॥ ೨ ॥

ಅಜಮನಿದ್ರಮಸ್ವಪ್ನಂ ಸಚ್ಚಿದಾನಂದರೂಪಿಣಮ್।
ಲೋಕಾನಾಂ ಶಾಂತಿದಾತಾರಂ **ಕೃಷ್ಣಂ ವಂದೇ ಜಗದ್ಗುರುಮ್**॥ ೩ ॥

ವಿಶ್ವರೂಪಧರಂ ವೀರಂ ಲೋಕಕಲ್ಯಾಣಕಾರಕಮ್।
ನಿತ್ಯಶುದ್ಧಂ ನಿತ್ಯಬುದ್ಧಂ **ಕೃಷ್ಣಂ ವಂದೇ ಜಗದ್ಗುರುಮ್** ॥ ೪ ॥

ನಿತ್ಯತೃಪ್ತಂ ನಿತ್ಯಮುಕ್ತಂ ನಿತ್ಯಾನಂದಪ್ರದಾಯಕಮ್।
ಜ್ಞಾನದೀಪಪ್ರದಂ ದೇವಂ **ಕೃಷ್ಣಂ ವಂದೇ ಜಗದ್ಗುರುಮ್** ॥ ೫ ॥

ಭವಬಂಧವಿನಿರ್ಮುಕ್ತಂ ಭವಸಾಗರತಾರಕಮ್।
ಬ್ರಹ್ಮಜ್ಞಾನೋಪದೇಷ್ಟಾರಂ **ಕೃಷ್ಣಂ ವಂದೇ ಜಗದ್ಗುರುಮ್** ॥ ೬ ॥

ಮಾತೃಭಕ್ತಂ ದೇವಭಕ್ತಂ ಗುರುಭಕ್ತಂ ನಿರಂಜನಮ್।
ಭಕ್ತಾನುಕಂಪಿನಂ ಶಾಂತಂ **ಕೃಷ್ಣಂ ವಂದೇ ಜಗದ್ಗುರುಮ್** ॥ ೭ ॥

ಅಜ್ಞಾನಧ್ವಾಂತಹರ್ತಾರಂ ಮುಕ್ತಿಮಾರ್ಗಪ್ರದರ್ಶಕಮ್।
ಕಾರುಣ್ಯಸಾಗರಂ ಪ್ರಾಜ್ಞಂ **ಕೃಷ್ಣಂ ವಂದೇ ಜಗದ್ಗುರುಮ್** ॥ ೮ ॥

ಯಃ ಪಠೇದಷ್ಟಕಂ ಸ್ತೋತ್ರಂ **ಶ್ರೀಕೃಷ್ಣಸ್ಯ ಜಗದ್ಗುರೋಃ**।
ಜ್ಞಾನದಂ ಮೋಕ್ಷದಂ ಚೈವ ಸರ್ವಸೌಭಾಗ್ಯದಾಯಕಮ್॥

ಲಭತೇ ಸಕಲಾನ್ ಕಾಮಾನ್ ಆಯುರಾರೋಗ್ಯಮೇವ ಚ।
ಆತ್ಮಜ್ಞಾನಂ ತಥಾ ಮೋಕ್ಷಂ **ಶ್ರೀಕೃಷ್ಣಸ್ಯ ಪ್ರಸಾದತಃ**॥

**॥ ಓಂ ಶಾಂತಿಃ ಶಾಂತಿಃ ಶಾಂತಿಃ ॥**

# 30. ಅಂತರ್ಯಾಮಿಯಾದ ಕೃಷ್ಣ

ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಅನೇಕ ಶ್ಲೋಕಗಳಲ್ಲಿ ತನ್ನ ಸ್ವರೂಪವನ್ನು ನಮಗೆ ತಿಳಿಸಿರುತ್ತಾನೆ. ೧೫-೧೫ ರಲ್ಲಿ ತನ್ನನ್ನು **ಸರ್ವಾಂತರ್ಯಾಮಿ** ಎಂದು ಕೃಷ್ಣನು ತಿಳಿಸಿದ್ದಾನೆ.

**ಸರ್ವಸ್ಯ ಚಾಹಂ ಹೃದಿ ಸಂನಿವಿಷ್ಟೋ**
**ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ।**
**ವೇದೈಶ್ಚ ಸರ್ವೈರಹಮೇವ ವೇದ್ಯೋ**
**ವೇದಾಂತಕೃದ್ ವೇದವಿದೇವ ಚಾಹಮ್॥**

ಭಗವದ್ಗೀತಾ ೧೫-೧೫

ಶ್ರೀಕೃಷ್ಣನು ತನ್ನ ಐದು ಮಹಿಮೆಗಳನ್ನು ಇಲ್ಲಿ ತಿಳಿಸಿದ್ದಾನೆ:

೧. **ಸರ್ವಸ್ಯ ಹೃದಿ ಅಹಂ ಸಂನಿವಿಷ್ಟಃ:** ಸಕಲ ಪ್ರಾಣಿಗಳ ಹೃದಯದಲ್ಲಿ ಅಂತರ್ಯಾಮಿಯಾಗಿರುವವನು ನಾನೇ ಆಗಿದ್ದೇನೆ. ಶುದ್ಧವಾದ ಮನಸ್ಸನ್ನು ಉಳ್ಳವರಿಗೆ ಭಗವಂತನ ದರ್ಶನವು ತಮ್ಮೊಳಗೇ ಆಗುತ್ತದೆ.

೨. **ಮತ್ತಃ ಸ್ಮೃತಿಃ ಜ್ಞಾನಮ್ ಅಪೋಹನಂ ಚ:** ಸಕಲ ಮಾನವರಿಗೂ ಸ್ಮರಣಶಕ್ತಿ, ಜ್ಞಾನಸಾಮರ್ಥ್ಯ, ಮರೆವುಗಳೆಲ್ಲವೂ ನನ್ನಿಂದಲೇ ಆಗುತ್ತಿವೆ. ಮನುಷ್ಯರಲ್ಲಿ ಕಾಣುವ ಮೇಧಾಶಕ್ತಿ, ವಿಚಾರಶಕ್ತಿ, ಗ್ರಹಣಶಕ್ತಿ, ಬುದ್ಧಿ ಸಾಮರ್ಥ್ಯಗಳೆಲ್ಲವೂ ನನ್ನಿಂದಲೇ ಉಂಟಾಗಿರುತ್ತವೆ.

೩. **ವೇದೈಶ್ಚ ಸರ್ವೈರಹಮೇವ ವೇದ್ಯಃ:** ಎಲ್ಲಾ ವೇದಗಳಿಂದಲೂ ವೇದ್ಯನಾದ ಪರಮಪುರುಷನೂ ನಾನೇ ಆಗಿದ್ದೇನೆ. ವೇದೋಪನಿಷತ್ತುಗಳೆಲ್ಲವೂ ಪ್ರತಿಪಾದಿಸುತ್ತಿರುವ ಪರಬ್ರಹ್ಮವು ನಾನೇ ಆಗಿರುತ್ತೇನೆ. ಇಡೀ ಜಗತ್ತಿಗೆ ಕಾರಣವಾಗಿರುವ ಪರಬ್ರಹ್ಮವೂ ನಾನೇ ಎಂದು ತಿಳಿಯಬೇಕು.

೪. **ವೇದಾಂತಕೃತ್:** ವೇದಾಂತಗಳನ್ನು ಎಂದರೆ ಉಪನಿಷತ್ತುಗಳನ್ನು ಮಾಡಿದವನೂ ನಾನೇ ಆಗಿದ್ದೇನೆ. ವೇದಾಂತಗಳ ಕರ್ತೃವೂ ವೇದಾಂತಗಳ ಆದಿಗುರುವೂ ನಾನೇ ಆಗಿರುತ್ತೇನೆ.

೫. **ವೇದವಿದೇವ ಚಾಹಮ್:** ವೇದಗಳನ್ನು ಬಲ್ಲವನೂ ನಾನೇ. "ವೇದಗಳೂ ನಾನೇ, ವೇದ ಪ್ರತಿಪಾದ್ಯನಾದ ಅಂತರ್ಯಾಮಿಯೂ ನಾನೇ, ವೇದಗಳ ಮೂಲಕರ್ತೃವೂ ನಾನೇ, ವೇದವಿದನೂ ನಾನೇ ಆಗಿದ್ದೇನೆ."

ಇದೆಲ್ಲವೂ ಶ್ರೀಕೃಷ್ಣನ ಸ್ವಂತ ನೇರವಾದ ಮಾತುಗಳು, ನೆನಪಿರಲಿ.

**ಶ್ರೀಕೃಷ್ಣನನ್ನು ವೇದವೇದಾಂತವೇದ್ಯವಾದ ಪರಬ್ರಹ್ಮವೆಂದೇ ಪೂಜಿಸಬೇಕು**

# 31. ಕೃಷ್ಣನು ಕಂಡ ಕೃಷ್ಣ

ಶ್ರೀಕೃಷ್ಣನನ್ನು ನೂರಾರು, ಸಹಸ್ರಾರು ಜನಗಳು ನಾನಾ ರೀತಿಯಿಂದ ಅರ್ಥಮಾಡಿಕೊಂಡಿರುತ್ತಾರೆ. ಇವೆಲ್ಲವೂ ಅವರವರ ವೈಯಕ್ತಿಕ ಅಭಿಪ್ರಾಯಗಳೇ ಹೊರತು ಕೃಷ್ಣನ ನಿಜಸ್ವರೂಪವಲ್ಲ. ಏಕೆಂದರೆ ಇವುಗಳೆಲ್ಲವೂ ಅವರವರ ಭಿನ್ನಭಿನ್ನ ಭಾವನೆಗಳಾಗಿರುತ್ತವೆ. ಸರಿ, ಹಾಗಾದರೆ ಕೃಷ್ಣನ ನಿಜಸ್ವರೂಪವು ಯಾವುದು? ಇದನ್ನು ನಾವು ಹೇಗೆ ತಿಳಿಯಬೇಕು? ಎಂದರೆ:

**ಕೃಷ್ಣನ ಮಾತುಗಳಿಂದಲೇ ಕೃಷ್ಣನ ನಿಜಸ್ವರೂಪವನ್ನು ತಿಳಿಯೋಣ:**

ಭಗವದ್ಗೀತೆಯಲ್ಲಿ ಕೃಷ್ಣನು ತನ್ನನ್ನು ತಾನೇ ಹೀಗೆ ವರ್ಣಿಸಿಕೊಂಡಿದ್ದಾನೆ:

**ಅಹಂ ಕ್ರತುರಹಂ ಯಜ್ಞಃ ಸ್ವಧಾಽಹಮಹಮೌಷಧಮ್।**
**ಮಂತ್ರೋಽಹಮಹಮೇವಾಜ್ಯಮ್ ಅಹಮಗ್ನಿರಹಂ ಹುತಮ್॥**

ಭಗವದ್ಗೀತಾ ೯-೧೬

ಈ ಶ್ಲೋಕದಲ್ಲಿ ಕೃಷ್ಣನು '**ಅಹಂ**' ಎಂದು ಎಂಟು ಬಾರಿ ಹೇಳಿದ್ದಾನೆ:

೧. **ಅಹಂ ಕ್ರತುಃ**: ನಾನೇ **ಕ್ರತು**ವಾಗಿದ್ದೇನೆ. ಶ್ರುತಿಗಳಲ್ಲಿ ವಿಧಿಸಿರುವ ಶ್ರೌತ ಕರ್ಮವಾದ ಕ್ರತುವು ನಾನೇ ಆಗಿದ್ದೇನೆ.

೨. **ಅಹಂ ಯಜ್ಞಃ**: ನಾನೇ **ಯಜ್ಞ**ವಾಗಿರುತ್ತೇನೆ. ಸ್ಮೃತಿಗಳಲ್ಲಿ ಹೇಳಿರುವ ಪಂಚಮಹಾಯಜ್ಞಗಳೂ ನಾನೇ ಆಗಿರುತ್ತೇನೆ.

೩. **ಅಹಂ ಸ್ವಧಾ**: ಪಿತೃಗಳಿಗಾಗಿ ಶ್ರದ್ಧೆಯಿಂದ ಕೊಡಲ್ಪಡುವ **ಸ್ವಧಾ** ಎಂಬ ಅನ್ನವೂ ನಾನೇ ಆಗಿದ್ದೇನೆ.

೪. **ಅಹಮ್ ಔಷಧಮ್**: ರೋಗನಾಶಕವಾದ ಆರೋಗ್ಯಕಾರಕವಾದ ಗಿಡ ಮೂಲಿಕೆಗಳೆಂಬ **ಔಷಧವೂ** ನಾನೇ ಆಗಿದ್ದೇನೆ.

೫. **ಅಹಂ ಮಂತ್ರಃ**: ವೇದೋಕ್ತವಾದ, ಯಜ್ಞಗಳಲ್ಲಿ ಹೇಳಲ್ಪಡುವ **ಮಂತ್ರ**ಗಳೂ ನಾನೇ ಆಗಿದ್ದೇನೆ.

೬. **ಅಹಮಾಜ್ಯಮ್**: ದೇವತೆಗಳಿಗಾಗಿ ಕೊಡಲ್ಪಡುವ ಹವಿಸ್ಸೆಂಬ ತುಪ್ಪವೂ ನಾನೇ ಆಗಿದ್ದೇನೆ.

೭. **ಅಹಮ್ ಅಗ್ನಿಃ**: ನಾನೇ ಯಜ್ಞೇಶ್ವರನೂ ಆಗಿದ್ದೇನೆ.

೮. **ಅಹಂ ಹುತಮ್**: ನಾನೇ ಹವನವೂ, ಹೋಮದ್ರವ್ಯವೂ ನಾನೇ, ಅಗ್ನಿಹೋತ್ರಕ್ರಿಯೆಯೂ ನಾನೇ ಆಗಿದ್ದೇನೆ.

**ಅಗ್ನಿಹೋತ್ರವೆಲ್ಲವೂ ನಿಜವಾಗಿ ಶ್ರೀಕೃಷ್ಣನೇ ಎಂದು ಭಾವಿಸಬೇಕು**

## 32. ಶ್ರೀಕೃಷ್ಣನ ಸಂಕಟದ ಮಾತು!

ಶ್ರೀಕೃಷ್ಣನು ಸಾಕ್ಷಾತ್ ಪರಮಾತ್ಮ; ಚರಾಚರಜಗತ್ತಿಗೆಲ್ಲ ಆತ್ಮನೇ ಶ್ರೀಕೃಷ್ಣ; ಜನ್ಮಮರಣಬಂಧನಾತೀತನಾದ ಪರಮಾತ್ಮನೇ ಶ್ರೀಕೃಷ್ಣ. ಸಕಲ ಸಂಸಾರಧರ್ಮ ಸಂಬಂಧವಿಲ್ಲದ, ನಿತ್ಯಶುದ್ಧ ನಿತ್ಯಬುದ್ಧ ನಿತ್ಯಮುಕ್ತ ಸ್ವರೂಪನೇ ಶ್ರೀಕೃಷ್ಣ; ಸಚ್ಚಿದಾನಂದಪರತತ್ತ್ವವೇ ಕೃಷ್ಣ. ಸಕಲ ಜ್ಞಾನಿಗಳೂ, ಮಹರ್ಷಿಗಳೂ, ತಪಸ್ವಿಗಳೂ, ಮಹಾತ್ಮರುಗಳೂ ಹೀಗೆಯೇ ಶ್ರೀಕೃಷ್ಣನನ್ನು ತಿಳಿದು ಆರಾಧಿಸುತ್ತಾರೆ.

ಆದರೆ ಸಂಸ್ಕಾರವಿಲ್ಲದ ಸಾಮಾನ್ಯ ಜನಗಳು ಮಾತ್ರ ಶ್ರೀಕೃಷ್ಣನ ನಿಜ ಸ್ವರೂಪವನ್ನು ತಿಳಿಯಲಾರದೇ ಕೃಷ್ಣನನ್ನು ವಸುದೇವದೇವಕಿಯರ ಮಗ ಎಂದೇ ತಪ್ಪಾಗಿ ತಿಳಿದಿರುತ್ತಾರೆ. ಎಂಥಾ ವಿಪರ್ಯಾಸವಿದು! ಈ ಮಾತುಗಳನ್ನು ಶ್ರೀಕೃಷ್ಣನೇ ಗೀತೆಯಲ್ಲಿ (೯-೧೧) ಹೀಗೆ ಸಂಕಟದಿಂದ ಹೇಳಿಕೊಂಡಿದ್ದಾನೆ:

**ಅವಜಾನಂತಿ ಮಾಂ ಮೂಢಾಃ ಮಾನುಷೀಂ ತನುಮಾಶ್ರಿತಮ್।**
**ಪರಂಭಾವಮಜಾನಂತಃ ಮಮ ಭೂತಮಹೇಶ್ವರಮ್॥**

*ಎಲೈ ಅರ್ಜುನನೇ, ಮೂಢಜನಗಳು ನನ್ನ ಪರತತ್ತ್ವವನ್ನು ಎಂದರೆ ನಿಜ ಸ್ವರೂಪವನ್ನು ಅರಿಯಲಾರದೇ, ನನ್ನನ್ನು ಮನುಷ್ಯನೆಂದು ತಪ್ಪಾಗಿ ತಿಳಿದಿರುತ್ತಾರೆ. ಆದರೆ ನಿಜವಾಗಿ ನಾನು ಅಜನಾಗಿ ಸರ್ವಭೂತಗಳಿಗೂ ಈಶ್ವರನಾಗಿದ್ದೇನೆ. ಆದರೆ ಇದು ಮೂಢರಾದ ಸಾಮಾನ್ಯಜನಗಳಿಗೆ ಅರ್ಥವಾಗಿಲ್ಲ.*

ಇದು ಭಗವಂತನ ಸಂಕಟದ, ನೋವಿನ ಮಾತು! ಅಂದರೆ ಭಗವಂತನೇ ಸ್ವತಃ ಆಡಿರುವ ಮಾತಿದು! ಈ ಶ್ಲೋಕದಲ್ಲಿ ಶ್ರೀಕೃಷ್ಣಭಗವಂತನು "**ಅವಜಾನಂತಿ ಮಾಂ ಮೂಢಾಃ**" ಎಂದಿದ್ದಾನೆ. ಮೂಢರು, ಅಜ್ಞರು, ಅವಿವೇಕಿಗಳು, ಬಾಲರು, ಅಜ್ಞಾನಿಗಳು ನನ್ನನ್ನು ಅವಜ್ಞೆಮಾಡುತ್ತಾರೆ; ಎಂದರೆ ನನ್ನನ್ನು ಕೀಳಾಗಿ ನೋಡುತ್ತಾರೆ. ನನ್ನನ್ನು ತುಚ್ಛವಾಗಿ ಕಾಣುತ್ತಾರೆ, ನನ್ನನ್ನು ತುಂಬಾ ಹಗುರವಾಗಿ ನೋಡುತ್ತಾರೆ. ಮೂಢರುಗಳ ಮಾತುಗಳನ್ನು ಕೇಳಿ, ಅವರ ನಡವಳಿಕೆಯನ್ನು ನೋಡುತ್ತಾ ಶ್ರೀಕೃಷ್ಣನು ಸಂಕಟದಿಂದ ನೊಂದುಕೊಂಡು ಹೀಗೆ ಹೇಳಿರುತ್ತಾನೆ. ಆದ್ದರಿಂದ ಈ ಮೌಢ್ಯವನ್ನು ಬಿಟ್ಟು ಶ್ರೀಕೃಷ್ಣನನ್ನು ಪರಮಾತ್ಮ ಎಂದೇ ಆರಾಧಿಸಬೇಕು, ಪೂಜಿಸಬೇಕು, ಗೌರವಿಸಬೇಕು ಎಂದು ಅಭಿಪ್ರಾಯ.

ಇದನ್ನೇ ಶ್ರೀಕೃಷ್ಣನು (೭-೨೫) ಹೀಗೆ ಹೇಳಿದ್ದಾನೆ:

**ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ।**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಮ್॥**

**ಶ್ರೀಕೃಷ್ಣನನ್ನು ಸಾಮಾನ್ಯಮನುಷ್ಯ ಎಂದು ತಿಳಿಯಬಾರದು**

# 33. ಅಹಮಾತ್ಮಾ ಗುಡಾಕೇಶ

ಶ್ರೀಕೃಷ್ಣನ ನಿಜಸ್ವರೂಪವನ್ನು ಅಂದರೆ ಪರಮಾರ್ಥಸ್ವರೂಪವನ್ನು ಶ್ರೀಕೃಷ್ಣನೇ ಭಗವದ್ಗೀತೆಯಲ್ಲಿ (೧೦-೨೦) ಹೀಗೆ ತಿಳಿಸಿದ್ದಾನೆ:

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ।**
**ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ॥**

*ಅರ್ಜುನನೇ, ನಾನು ಸಕಲ ಪ್ರಾಣಿಗಳ ಹೃದಯದಲ್ಲಿರುವ ಆತ್ಮನಾಗಿದ್ದೇನೆ. ನಾನೇ ಸಕಲ ಪ್ರಾಣಿಗಳಿಗೂ ಆದಿಯೂ ಮಧ್ಯವೂ ಅಂತವೂ ಆಗಿದ್ದೇನೆ.*

ಸಕಲ ಉಪನಿಷತ್ತುಗಳ ಸಾರವನ್ನೇ ಈ ಶ್ಲೋಕದಲ್ಲಿ ಹೇಳಿರುತ್ತದೆ. ಸಕಲ ಚರಾಚರವಸ್ತುಗಳಲ್ಲಿಯೂ ಪರಬ್ರಹ್ಮವು ಇರುತ್ತದೆ. ಪರಬ್ರಹ್ಮವು ಸಚ್ಚಿದಾನಂದ ಸ್ವರೂಪವಾಗಿ ನಿರ್ವಿಕಾರದಿಂದ ಇರುತ್ತದೆ ಎಂದು ಉಪನಿಷತ್ತುಗಳು ಸಾರಿಸಾರಿ ಹೇಳುತ್ತಿವೆ. ಉದಾಹರಣೆಗೆ: **ಏಷ ಸರ್ವೇಷು ಭೂತೇಷು ಗೂಢೋಽಽತ್ಮಾ ನ ಪ್ರಕಾಶತೇ**, ಕಾಠಕ; **ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್** ಎಂದು ತೈತ್ತಿರೀಯ; **ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ** ಎಂದು ಬೃಹದಾರಣ್ಯಕ—ಉಪನಿಷತ್ತುಗಳು ಹೇಳುತ್ತಿವೆ.

ಆತ್ಮನೆಂದರೆ ಪ್ರತ್ಯಗಾತ್ಮನು. ಇವನಿಗೆ ನಾಮ, ರೂಪ, ಗುಣ, ಕ್ರಿಯಾಧರ್ಮಗಳಿಲ್ಲ. ದೇಶಕಾಲಗಳನ್ನೂ ಮೀರಿರುವ ಆತ್ಮನಿವನು; ಇವನೇ ಅಂತರ್ಯಾಮಿಯೂ ಸಾಕ್ಷಿಯೂ ಆದ ಆತ್ಮನು; ಈ ಆತ್ಮನನ್ನು ತಾನೆಂದು ತಿಳಿದವನೇ ಆತ್ಮಜ್ಞಾನಿಯೆನಿಸುತ್ತಾನೆ. ಇದನ್ನೇ **ಪ್ರತಿಬೋಧವಿದಿತಂ ಮತಮ್ ಅಮೃತತ್ವಂ ಹಿ ವಿಂದತೇ** ಎಂದು ಕೇನೋಪನಿಷತ್ತು ಹೇಳುತ್ತಿದೆ. ಇದೆಲ್ಲದರ ಸಾರವೋ ಎನ್ನುವಂತೆ ಶ್ರೀಕೃಷ್ಣನು ಭಗವದ್ಗೀತೆಯಲ್ಲಿ **ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ** ಎಂದು ಹೇಳಿದ್ದಾನೆ.

ಶ್ರೀಕೃಷ್ಣ ಎಂದರೆ ಒಬ್ಬ ಮನುಷ್ಯ ಎಂದು ತಿಳಿಯಬಾರದು. ಮತ್ತೇನೆಂದರೆ: ಸ್ಥಾವರಜಂಗಮಾತ್ಮಕವಾದ ಇಡೀ ಜಗತ್ತಿಗೆ ಕಾರಣನಾದ ಪರಮಾತ್ಮನೇ ಎಂದು ತಿಳಿಯಬೇಕು. ಶ್ರೀಕೃಷ್ಣನೆಂದರೆ ಇಡೀ ವಿಶ್ವಕ್ಕೆ ಉಪಾದಾನಕಾರಣವೂ ನಿಮಿತ್ತಕಾರಣವೂ ಆದ ಪರಬ್ರಹ್ಮವೆಂದೇ ತಿಳಿಯಬೇಕು. ಇದು ಸ್ವತಃ ಶ್ರೀಕೃಷ್ಣನ ಮಾತು ಎಂಬುದೂ ನಮಗೆ ತಿಳಿದಿರಬೇಕು. ಹೀಗಾಗಿ ಇಂಥ ಪರಬ್ರಹ್ಮಸ್ವರೂಪಿಯಾದ ಶ್ರೀಕೃಷ್ಣನನ್ನು ಜಗದ್ಗುರುವೆಂದರೆ ತಪ್ಪಾಗಲಾರದು. ಆದ್ದರಿಂದಲೇ **ಕೃಷ್ಣಂ ವಂದೇ ಜಗದ್ಗುರುಮ್** ಎಂಬ ಹಿರಿಯರ ವಾಕ್ಯವು, ಮಹಾತ್ಮರುಗಳ ವಚನವು ಶ್ರೀಕೃಷ್ಣನಿಗೆ ಅನ್ವರ್ಥವಾಗಿದೆಯಲ್ಲವೇ?

**ಶ್ರೀಕೃಷ್ಣನನ್ನು ಸರ್ವಪ್ರತ್ಯಗಾತ್ಮಾ ಎಂದು ತಿಳಿಯಬೇಕು**

# 34. ಸಮೋಽಹಂ ಸರ್ವಭೂತೇಷು

ಶ್ರೀಕೃಷ್ಣನು ಸರ್ವಪ್ರಾಣಿಗಳಿಗೂ ಆತ್ಮನಾಗಿರುವುದರಿಂದ ಸಕಲ ಪ್ರಾಣಿಗಳಲ್ಲಿಯೂ ಸಮನಾಗಿರುತ್ತಾನೆ. ಈ ಮಾತನ್ನು ಶ್ರೀಕೃಷ್ಣನೇ ಹೀಗೆ ಹೇಳಿದ್ದಾನೆ:

**ಸಮೋಽಹಂ ಸರ್ವಭೂತೇಷು**
**ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ।**
**ಯೇ ಭಜಂತಿ ತು ಮಾಂ ಭಕ್ತ್ಯಾ**
**ಮಯಿ ತೇ ತೇಷು ಚಾಪ್ಯಹಮ್॥** ಭಗವದ್ಗೀತಾ ೯-೨೯

*ಅರ್ಜುನನೇ, ನಾನು ಸರ್ವಪ್ರಾಣಿಗಳಲ್ಲಿಯೂ ಸಮನಾಗಿ ಅವರಿಗೆ ಆತ್ಮನಾಗಿರುತ್ತೇನೆ; ನನಗೆ ಶತ್ರುಗಳಾಗಲೀ ಮಿತ್ರರಾಗಲೀ ಯಾರೂ ಇಲ್ಲ ; ನನ್ನನ್ನು ಯಾರು ಭಕ್ತಿಯಿಂದ ಭಜಿಸುತ್ತಾರೆಯೋ, ಅಂಥವರು ನನ್ನಲ್ಲಿರುತ್ತಾರೆ, ಮತ್ತು ಅವರಲ್ಲಿ ನಾನೂ ಇರುತ್ತೇನೆ.*

ಎಷ್ಟೊಂದು ಅರ್ಥಪೂರ್ಣವಾದ ಮಾತಿದು! ಇದು ಗೀತಾಚಾರ್ಯ ಶ್ರೀಕೃಷ್ಣನ ನೇರಾದ ಮಾತು! ಹಿರಣ್ಯಗರ್ಭಬ್ರಹ್ಮನಿಂದ ಪ್ರಾರಂಭಿಸಿ ದೇವತೆಗಳು, ಮಾನವರು, ರಾಕ್ಷಸರು, ಪಶುಪಕ್ಷಿಗಳು, ಕ್ರಿಮಿಕೀಟಗಳು—ಎಲ್ಲಾ ಪ್ರಾಣಿಗಳಲ್ಲಿಯೂ ನಾನು ಸಮನಾಗಿದ್ದು ಅವರಿಗೆ ಅಂತರ್ಯಾಮಿಯಾಗಿ ಅಂತರಾತ್ಮನಾಗಿರುತ್ತೇನೆ. ಹೀಗಾಗಿ ಭಗವಂತನಾದ ಶ್ರೀಕೃಷ್ಣನಿಗೆ ಯಾರ ಮೇಲೂ ರಾಗವಾಗಲೀ ದ್ವೇಷವಾಗಲೀ ಇಲ್ಲ. ಭಗವಂತನಿಗೆ ಶತ್ರುಗಳಾಗಲೀ ಮಿತ್ರರಾಗಲೀ ಇಲ್ಲ.

**ಅಗ್ನಿವತ್ ಅಹಮ್ ಅಸ್ಮಿ; ದೂರಸ್ಥಾನಾಂ ಯಥಾ ಅಗ್ನಿಃ ಶೀತಂ ನ ಅಪನಯತಿ; ಸಮೀಪಮ್ ಉಪಸರ್ಪತಾಂ ಯಥಾ ಚ ಶೀತಮ್ ಅಪನಯತಿ, ತಥಾ ಅಹಂ ಭಕ್ತಾನ್ ಅನುಗೃಹ್ಣಾಮಿ, ನ ಇತರಾನ್।** ಎಂದು ಶ್ರೀಶಂಕರರು ಗೀತಾಭಾಷ್ಯದಲ್ಲಿ ಬರೆದಿರುತ್ತಾರೆ. ಅರ್ಥವು ಸುಲಭವಾಗಿದೆ.

ಅಗ್ನಿಯಂತೆ, ಸೂರ್ಯನಂತೆ ನಾನು ಪಕ್ಷಪಾತರಹಿತನಾಗಿದ್ದೇನೆ. ಅರ್ಜುನನೇ, ನನಗೆ ಯಾರೂ ಶತ್ರುಗಳಿಲ್ಲ, ಯಾರೂ ಮಿತ್ರರೂ ಇಲ್ಲ. ಏಕೆಂದರೆ ಎಲ್ಲರೂ ನನ್ನೊಳಗೇ ಇದ್ದಾರೆ; ಮತ್ತು ಎಲ್ಲರಲ್ಲಿಯೂ ನಾನೂ ಇರುತ್ತೇನೆ. ಭಗವಂತನು ಸರ್ವಪ್ರಾಣಿಗಳಿಗೂ ಸಮನಾದ ಪ್ರತ್ಯಗಾತ್ಮನಾಗಿರುತ್ತಾನೆ. ಹೀಗೆ ಕೃಷ್ಣನನ್ನು ತಿಳಿದವರೇ ಬ್ರಹ್ಮಜ್ಞಾನಿಪುಂಗವರೆನಿಸುತ್ತಾರೆ. ಆದ್ದರಿಂದಲೇ ಎಲ್ಲಾ ಋಷಿಮುನಿಗಳೂ, ಸಾಧು ಸಂತರುಗಳೂ, ಮಹಾತ್ಮರುಗಳೂ, ತಪಸ್ವಿಗಳೂ, ಆತ್ಮಜ್ಞಾನಿಗಳೂ ಶ್ರೀಕೃಷ್ಣನನ್ನು ತಮ್ಮ ಅಂತರಾತ್ಮನೆಂದೇ ತಿಳಿದಿರುತ್ತಾರೆ.

**ಸರ್ವಾಂತರ್ಯಾಮಿಯೆಂದೇ ತಿಳಿದು ಕೃಷ್ಣನನ್ನು ಪೂಜಿಸಬೇಕು**

## 35. ತದ್ಧಾಮ ಪರಮಂ ಮಮ

ಸೂರ್ಯಚಂದ್ರನಕ್ಷತ್ರಾದಿಗಳಾವುವೂ ಯಾವ ಸ್ವಯಂಜ್ಯೋತಿಃಸ್ವರೂಪನಾದ ಪರಮಾತ್ಮನನ್ನು ಬೆಳಗಲಾರವೋ **"ಅದೇ ನನ್ನ ನಿಜವಾದ ಸ್ವರೂಪವು"** ಎಂದು ಶ್ರೀಕೃಷ್ಣನು ಭಗವದ್ಗೀತೆಯಲ್ಲಿ (೧೫-೬) ಹೇಳಿರುತ್ತಾನೆ. ಆ ಶ್ಲೋಕವನ್ನು ನಾವೀಗ ನೋಡೋಣ:

**ನ ತದ್ಭಾಸಯತೇ ಸೂರ್ಯೋ**
**ನ ಶಶಾಂಕೋ ನ ಪಾವಕಃ।**
**ಯದ್ಗತ್ವಾ ನ ನಿವರ್ತಂತೇ**
**"ತದ್ಧಾಮ ಪರಮಂ ಮಮ"॥** ಭಗವದ್ಗೀತಾ ೧೫-೬

*ಯಾವ ಪರಬ್ರಹ್ಮತತ್ತ್ವವನ್ನು ಸೂರ್ಯನು ಬೆಳಗಲಾರನೋ, ಚಂದ್ರನೂ ಬೆಳಗಲಾರನೋ, ಅಗ್ನಿಯೂ ಯಾವುದನ್ನು ಬೆಳಗಲಾರನೋ; ಮತ್ತು ಯಾವ ಪರಬ್ರಹ್ಮವನ್ನು ಹೊಂದಿದವರು ಪುನಃ ಸಂಸಾರಚಕ್ರಕ್ಕೆ ಸಿಕ್ಕಿಕೊಳ್ಳುವುದಿಲ್ಲವೋ, ಎಲೈ ಅರ್ಜುನನೇ, ಅಂಥ ಶ್ರೇಷ್ಠವಾದ ಪದವೇ ನನ್ನದು! ಆ ಪರಬ್ರಹ್ಮವೇ ನಾನಾಗಿದ್ದೇನೆ!*

ಈ ಶ್ಲೋಕದಲ್ಲಿ ಶ್ರೀಕೃಷ್ಣನು ತನ್ನ ನಿಜಸ್ವರೂಪವನ್ನು ಧೈರ್ಯವಾಗಿ ಹಾಗೂ ಸರಳವಾಗಿ ಮತ್ತು ಸುಸ್ಪಷ್ಟವಾಗಿ ತಿಳಿಸಿರುತ್ತಾನೆ. ಇದರಿಂದ ನಮಗೆ ಶ್ರೀಕೃಷ್ಣನ ನಿಜಸ್ವರೂಪವು ಚೆನ್ನಾಗಿ ತಿಳಿಯುತ್ತದೆ. **ಶ್ರೀಕೃಷ್ಣ ಎಂದರೆ ಪುನರಾವೃತ್ತಿರಹಿತವಾದ ಮೋಕ್ಷವೇ** ಎಂದರ್ಥ. ಬ್ರಹ್ಮಜ್ಞಾನದಿಂದ ಬ್ರಹ್ಮವಿದರು ಪಡೆದುಕೊಳ್ಳುವ ಮೋಕ್ಷಪದವಿಯೇ ಶ್ರೀಕೃಷ್ಣ ಎಂದು ತಿಳಿಯಬೇಕು. ಮೋಕ್ಷಸಾಮ್ರಾಜ್ಯವೇ ಶ್ರೀಕೃಷ್ಣ ಎಂದು ತಿಳಿಯಬೇಕು. ಶ್ರೀಕೃಷ್ಣನ ಸಾಕ್ಷಾತ್ ಸಂದೇಶವಿದು!

ಇದನ್ನೇ ಬ್ರಹ್ಮಜ್ಞಾನಿವರೇಣ್ಯರಾಗಿದ್ದ ಭೀಷ್ಮಾಚಾರ್ಯರು ತಮ್ಮ **ಸ್ತವರಾಜ**ದಲ್ಲಿ **ತಸ್ಮೈ ಮೋಕ್ಷಾತ್ಮನೇ ನಮಃ**, ಮೋಕ್ಷಸ್ವರೂಪನಾದ ಕೃಷ್ಣನಿಗೆ ನಮಸ್ಕಾರ ಎಂದಿದ್ದಾರೆ. ನಿವೃತ್ತಿಧರ್ಮಪರಾಯಣರಾದ, ಪುಣ್ಯಪಾಪಗಳನ್ನು ಆತ್ಮಜ್ಞಾನಾಗ್ನಿಯಿಂದ ಭಸ್ಮಮಾಡಿಕೊಂಡಿರುವ ಮಹಾತ್ಮರಾದ ಯತಿಪುಂಗವರಿಗೆ ದೊರಕುವ ಅಮೃತತ್ವವೆಂಬ ಮೋಕ್ಷವು ಶ್ರೀಕೃಷ್ಣನೇ ಎಂದು ಭೀಷ್ಮಾಚಾರ್ಯರು ಕೃಷ್ಣನನ್ನು ಸ್ತುತಿಸಿದ್ದಾರೆ.

ಇದನ್ನೇ ಶ್ರೀಶಂಕರರು **ಜಾತವಾನಿವ, ಲೋಕಾನುಗ್ರಹಂ ಕುರ್ವನ್ನಿವ ಚ ಲಕ್ಷ್ಯತೇ**, ಶ್ರೀಕೃಷ್ಣನು ಹುಟ್ಟಿದವನಂತೆ ಲೋಕಾನುಗ್ರಹವನ್ನು ಮಾಡುವವನಂತೆ ನಮಗೆ ತೋರುತ್ತಿದ್ದಾನೆ; ಕೃಷ್ಣನೆಂದರೆ ಪರಮಾತ್ಮನೇ ಎಂದು ಬರೆದಿದ್ದಾರೆ.

**ಶ್ರೀಕೃಷ್ಣನನ್ನು 'ಪರಂಧಾಮ' ಎಂದೇ ತಿಳಿಯಬೇಕು**

# 36. ಆದರ್ಶಪುರುಷನಾಗಿ ಕೃಷ್ಣ

ಶ್ರೀಕೃಷ್ಣನ ಜೀವನವು ಎಲ್ಲಾ ದೃಷ್ಟಿಯಿಂದಲೂ **ಆದರ್ಶವೇ** ಆಗಿರುತ್ತದೆ. ಶ್ರೀಕೃಷ್ಣನ ಆದರ್ಶಜೀವನದ ಕೆಲವು ಉದಾಹರಣೆಗಳನ್ನು ನೋಡೋಣ:

ದೇವಕೀದೇವಿಗೆ ಆನಂದವನ್ನುಂಟುಮಾಡಿ **ಆದರ್ಶ ಶಿಶುವಾಗಿ**
ಯಶೋದಾದೇವಿಗೆ ಮಗನಾಗಿ **ಆದರ್ಶ ಸುಪುತ್ರನಾಗಿ**
ವಸುದೇವನ ವಂಶವನ್ನು ಬೆಳಗುತ್ತಾ **ಆದರ್ಶ ವಾಸುದೇವನಾಗಿ**
ಬಲರಾಮನಿಗೆ ವಿಧೇಯನಾಗಿ **ಆದರ್ಶ ಸಹೋದರನಾಗಿ**
ಸಾಂದೀಪನೀ ಸದ್ಗುರುಗಳಿಗೆ ಸೇವೆಮಾಡುತ್ತಾ **ಆದರ್ಶ ಶಿಷ್ಯನಾಗಿ**
ಅರ್ಜುನನಿಗೆ ಸರ್ವವಿಧದಲ್ಲಿಯೂ ಸಹಕರಿಸುತ್ತಾ **ಆದರ್ಶ ಮಿತ್ರನಾಗಿ**
ಪಾಂಡವರಿಗೆ ಮಾರ್ಗದರ್ಶನಮಾಡುತ್ತಾ **ಆದರ್ಶ ಸುಹೃದನಾಗಿ**
ಕೌರವರಿಗೆ ನೀತಿಯನ್ನು ಉಪದೇಶಿಸುತ್ತಾ **ಆದರ್ಶ ಬೋಧಕನಾಗಿ**
ರಾಧಾರುಕ್ಮಿಣಿಯರನ್ನು ಪ್ರೀತಿಸುತ್ತಾ **ಆದರ್ಶ ಗೃಹಸ್ಥನಾಗಿ**
ಅಸಂಗನೂ ಪರಬ್ರಹ್ಮಸ್ವರೂಪನೂ ಆಗಿ **ಆದರ್ಶ ಬ್ರಹ್ಮಚಾರಿಯಾಗಿ**
ಋಷಿಮುನಿಗಳಿಂದ ಪೂಜಿಸಲ್ಪಡುತ್ತಾ **ಆದರ್ಶ ಪರಮಾತ್ಮನಾಗಿ**
ಗುರುಹಿರಿಯರಿಗೆ ಭಕ್ತಿಯಿಂದ ವಂದಿಸುತ್ತಾ **ಆದರ್ಶ ಭಕ್ತನಾಗಿ**
ಬ್ರಹ್ಮಜ್ಞಾನೋಪದೇಶವನ್ನು ಮಾಡುತ್ತಾ **ಆದರ್ಶ ಬ್ರಹ್ಮವಿದ್ಯಾಚಾರ್ಯನಾಗಿ**
ವೇದಾಂತಸಂದೇಶಸಾರವನ್ನು ತಿಳಿಸುತ್ತಾ **ಆದರ್ಶ ವೇದಾಂತಸದ್ಗುರುವಾಗಿ**
ಸರ್ವರಿಗೂ ಬ್ರಹ್ಮವಿದ್ಯೆಯನ್ನು ತಿಳಿಸುತ್ತಾ **ಆದರ್ಶ ಜಗದ್ಗುರುವಾಗಿ**
ಸದ್ಗುರು ಸೇವೆಯ ಮರ್ಮವನ್ನು ತಿಳಿಸುತ್ತಾ **ಆದರ್ಶ ಗುರುಭಕ್ತನಾಗಿ**
ಆಧ್ಯಾತ್ಮಸಾಧನಗಳನ್ನು ಉಪದೇಶಿಸುತ್ತಾ **ಆದರ್ಶ ಸಾಧಕನಾಗಿ**
ಭಗವದ್ಗೀತೆಯನ್ನು ಅನುಗ್ರಹಿಸುತ್ತಾ **ಆದರ್ಶ ಗೀತಾಚಾರ್ಯನಾಗಿ**
ಅಕರ್ತೃತ್ವ ಅಭೋಕ್ತೃತ್ವಸ್ವರೂಪವನ್ನು ತಿಳಿಸುತ್ತಾ **ಆದರ್ಶ ಅಸಂಗಿಯಾಗಿ**
ದ್ವಾರಕಾಧೀಶನಾಗಿ ಪ್ರಜಾಪಾಲನೆ ಮಾಡುತ್ತಾ **ಆದರ್ಶ ಚಕ್ರವರ್ತಿಯಾಗಿ**
ತಾನು ಅಜ, ಅಮೃತನೆಂದು ಸಾರುತ್ತಾ **ಆದರ್ಶ ಪರಬ್ರಹ್ಮಸ್ವರೂಪನಾಗಿ**
ವಿರಕ್ತ ಯತಿಗಳಿಂದ ಧ್ಯಾನಿಸಲ್ಪಡುತ್ತಾ **ಆದರ್ಶ ಯತಿಪುಂಗವನಾಗಿ**
ಗೋಪಿಕಾಸ್ತ್ರೀಯರ ಮನವನ್ನು ಗೆದ್ದು **ಆದರ್ಶ ಸುಂದರಮೂರ್ತಿಯಾಗಿ**
ಪರಂಧಾಮವೇ ತಾನೆಂದು ಸಾರುತ್ತಾ **ಆದರ್ಶ ಮುಕ್ತಿಸ್ವರೂಪನಾಗಿ**

## 37. ನಾಹಂ ಪ್ರಕಾಶಃ ಸರ್ವಸ್ಯ

ಗೀತಾಚಾರ್ಯ ಶ್ರೀಕೃಷ್ಣಭಗವಂತನ ನಿಜಸ್ವರೂಪವು ಸಾಮಾನ್ಯರಿಗೆ ತಿಳಿಯುವುದಿಲ್ಲ ; ಹೀಗೆಂದು ಶ್ರೀಕೃಷ್ಣನೇ ಈ ಕೆಳಗಿನ ಶ್ಲೋಕದಲ್ಲಿ ಸಂಕಟದಿಂದ ಸುಸ್ಪಷ್ಟವಾಗಿ ಹೇಳಿದ್ದಾನೆ:

**ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ।**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಮ್॥**

ಭಗವದ್ಗೀತಾ ೭-೨೫

*ಅರ್ಜುನನೇ, ನನ್ನ ಯೋಗಮಾಯೆಯಿಂದ ಸಮಾವೃತನಾಗಿರುವ ನಾನು ಎಲ್ಲರಿಗೂ ಅರ್ಥವಾಗುವುದಿಲ್ಲ. ಆದ್ದರಿಂದಲೇ ಮೂಢಜನಗಳು ನನ್ನನ್ನು ಅಜನೆಂದೂ ಅವ್ಯಯನೆಂದೂ ಅರಿಯಲಾರರು.*

ಗೀತಾಚಾರ್ಯನಾದ ಶ್ರೀಕೃಷ್ಣನನ್ನು ಸಹಸ್ರಾರು, ಲಕ್ಷಗಟ್ಟಲೆ ಜನಗಳು ನೋಡಿದ್ದರು; ಏಕೆಂದರೆ ಕೃಷ್ಣನು ಅತ್ಯಂತ ಸರಳವ್ಯಕ್ತಿ. ಯಾರು ಬೇಕಾದರೂ, ಯಾವಾಗ ಬೇಕಾದರೂ ಎಲ್ಲಿ ಬೇಕಾದರೂ ಕೃಷ್ಣನನ್ನು ನೋಡಬಹುದಾಗಿತ್ತು. ಹೀಗಾಗಿ ಕೃಷ್ಣನನ್ನು ನೋಡಿದ್ದ ಜನಗಳು ಅಸಂಖ್ಯಾತ! ಆದರೆ ಕೃಷ್ಣನ ನಿಜ ಸ್ವರೂಪವು ಅವರೆಲ್ಲರಿಗೂ ಸರಿಯಾಗಿ ತಿಳಿದಿರಲಿಲ್ಲ. ಏಕೆಂದರೆ ಶ್ರೀಕೃಷ್ಣನು ತನ್ನ ಯೋಗಮಾಯೆಯಿಂದ ಸಮಾವೃತನಾಗಿರುತ್ತಾನೆ.

**ಯೋಗಮಾಯಾಸಮಾವೃತಃ** ಎನ್ನುವ ಮಾತಿಗೆ ಶ್ರೀಶಂಕರರು **ಯೋಗಃ ಗುಣಾನಾಂ ಯುಕ್ತಿಃ ಘಟನಂ। ಸಾ ಏವ ಮಾಯಾ ಯೋಗಮಾಯಾ** ಎಂದು ಬರೆದಿದ್ದಾರೆ; ಗುಣಗಳ ಕೂಡಿಕೊಂಡಿರುವಿಕೆಯೇ ಯೋಗಮಾಯೆಯು. ಇದರಿಂದ ಭಗವಂತನು ಸಮಾವೃತನಾಗಿರುತ್ತಾನೆ. ಭಗವಂತನಾದ ಶ್ರೀಕೃಷ್ಣನನ್ನು ಭಗವಂತನೆಂದು ತಿಳಿಯುವುದಕ್ಕೆ ಭಗವಂತನ ಯೋಗಮಾಯೆಯೇ ಸಾಮಾನ್ಯರಿಗೆ ಅಡ್ಡಿಯಾಗಿರುತ್ತದೆ. ಅಂದರೆ ಭಗವಂತನ ಬಾಹ್ಯ ವ್ಯವಹಾರಗಳು, ಭಗವಂತನ ಶರೀರದ ಬಣ್ಣ, ಭಗವಂತನ ಉಡುಪುಗಳು, ಭಗವಂತನ ಊಟ-ತಿಂಡಿಗಳು ಇವುಗಳೇ ಯೋಗಮಾಯೆಗಳು. ಇವುಗಳು ಭಗವಂತನ ನಿಜಸ್ವರೂಪವನ್ನು ತಿಳಿಯದಂತೆ ಮಾಡಿರುತ್ತವೆ. ಹೊರಗಿನ ಉಪಾಧಿಗಳನ್ನೇ ನೋಡುವವರಿಗೆ ಭಗವಂತನ ಸಹಜ ನೈಜಸ್ವರೂಪವು ತಿಳಿಯುವುದಿಲ್ಲ. ವಿವೇಕದ ಬಲದಿಂದ ಉಪಾಧಿಗಳನ್ನು ಬಿಟ್ಟಾಗ ಮಾತ್ರವೇ ಭಗವಂತನ ನೈಜಸ್ವರೂಪದ ದರ್ಶನವಾಗುತ್ತದೆ ಎಂದು ತಿಳಿಯಬೇಕು.

**ಉಪಾಧಿಗಳನ್ನು ಕೈಬಿಟ್ಟು ಶ್ರೀಕೃಷ್ಣನ ನಿಜಸ್ವರೂಪವನ್ನು ಅರಿಯಬೇಕು**

# 38. ಸಂಸಾರಸಾಗರೋದ್ಧಾರಕನಾಗಿ ಕೃಷ್ಣ

ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ತನ್ನನ್ನು 'ಅಹಂ' ಎಂದು ಕರೆದುಕೊಂಡು ಅನೇಕ ವಿಷಯಗಳನ್ನು ತಿಳಿಸಿರುತ್ತಾನೆ. ಇನ್ನು, ಉತ್ತಮಪುರುಷ ಏಕವಚನದಲ್ಲಿ ಕೆಲವು ಕ್ರಿಯಾಪದಗಳನ್ನೂ ಶ್ರೀಕೃಷ್ಣನು ಬಳಸಿರುತ್ತಾನೆ. ನನ್ನ ಭಕ್ತರುಗಳನ್ನು ಈ ಸಂಸಾರಸಾಗರದಿಂದ ದಾಟಿಸುತ್ತೇನೆ ಎಂದು ಶ್ರೀಕೃಷ್ಣನು ಗೀತೆಯಲ್ಲಿ ಈ ಶ್ಲೋಕದಲ್ಲಿ ಹೇಳಿರುತ್ತಾನೆ:

**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್ ॥**

ಭಗವದ್ಗೀತಾ ೧೨-೭

*ನನ್ನಲ್ಲಿಯೇ ನೆಟ್ಟ ಮನಸ್ಸುಳ್ಳಂಥ ನನ್ನ ಭಕ್ತರುಗಳನ್ನು, ಪಾರ್ಥನೇ, ನಾನೇ ಈ ಮೃತ್ಯುರೂಪವಾದ ಸಂಸಾರಸಾಗರದಿಂದ ತಡಮಾಡದೇ ಮೇಲಕ್ಕೆ ಎತ್ತುತ್ತೇನೆ.*

ಇದು ಗೀತಾಚಾರ್ಯನಾದ ಶ್ರೀಕೃಷ್ಣಭಗವಂತನ ಸ್ವಂತ ವಾಣಿ: "ನನ್ನ ಭಕ್ತರನ್ನು ನಾನು ಭವಸಾಗರದಿಂದ ದಾಟಿಸಿಬಿಡುತ್ತೇನೆ." ಸಾಧಕರ ಕೆಲಸ, ಭಗವಂತನಲ್ಲಿ ಸಂಪೂರ್ಣ ಮನಸ್ಸನ್ನು ಇಡುವುದು; ಬಾಹ್ಯ ಅನಾತ್ಮವಸ್ತುಗಳಿಂದ ತಮ್ಮ ಮನಸ್ಸನ್ನು ಹಿಂತಿರುಗಿಸಿ, ಭಕ್ತಿಯಿಂದ ಆ ಮನಸ್ಸನ್ನು ಭಗವಂತನ ಕಡೆಗೇ ಸಂಪೂರ್ಣವಾಗಿ ತಿರುಗಿಸುವುದು ಮುಮುಕ್ಷುಗಳ ಕರ್ತವ್ಯ! ಅಂದರೆ ಭಗವದ್ಭಕ್ತಿಯಲ್ಲಿ ಅನಾರ್ಜವವು ಇರಬಾರದು, ಯಾವ ಕಲ್ಮಷಗಳೂ ಇರಬಾರದು; ನಿಷ್ಕಲ್ಮಷವಾದ ನಿಷ್ಕಲಂಕವಾದ ಪ್ರೇಮರೂಪವಾದ ಭಕ್ತಿಯು ಭಕ್ತರಿಗೆ ಭಗವಂತನಲ್ಲಿ ಇರಬೇಕು. ಸಹಜವಾದ ಭಕ್ತಿಯು ಇರಬೇಕು. ಇದನ್ನೇ "**ಮಯ್ಯಾವೇಶಿತಚೇತಸಾಮ್**" ಎಂದಿದ್ದಾನೆ ಶ್ರೀಕೃಷ್ಣ.

ಇಷ್ಟನ್ನು ಮಾಡುತ್ತಿದ್ದರೆ ಅಲ್ಲಿಗೆ ಮುಮುಕ್ಷು ಸಾಧಕರುಗಳ ಕೆಲಸವು ಮುಗಿದಂತೆ; ಇನ್ನು ಮುಂದೆ ಭಗವಂತನ ಜವಾಬ್ದಾರಿ! ಅಂಥ ಭಕ್ತರನ್ನು ಭಗವಂತನೇ ಕೈಹಿಡಿದು ತನ್ನ ಹತ್ತಿರಕ್ಕೆ ಕರೆದುಕೊಂಡು ಹೋಗುತ್ತಾನೆ. ಭವಸಾಗರದಲ್ಲಿ ಮುಳುಗಿರುವ ಸಂಸಾರಿಗಳನ್ನು ಭಗವಂತನು ಪ್ರೀತಿಯಿಂದ ಮೇಲಕ್ಕೆ ಎತ್ತುತ್ತಾನೆ. ಮೃತ್ಯುಸಂಸಾರಸಾಗರವು ಭಯಂಕರವಾದದ್ದು. ದುಃಖರೂಪವಾದ ಸಂಸಾರವು ಸಾಗರದಷ್ಟೇ ಭಯಂಕರವಾಗಿದೆ. ಆತ್ಮಜ್ಞಾನವನ್ನು ಅನುಗ್ರಹಿಸಿ ಅಜ್ಞಾನವನ್ನು ದೂರಮಾಡಿ, ಭಗವಂತನೇ ತನ್ನ ಭಕ್ತರಿಗೆ ಮೋಕ್ಷವನ್ನು ಅನುಗ್ರಹಿಸಿ ಅವರನ್ನು ಕಾಪಾಡುತ್ತಾನೆ ಎಂದು ಅಭಿಪ್ರಾಯವು.

**ಸಂಸಾರಸಾಗರತಾರಕನೆಂದು ಶ್ರೀಕೃಷ್ಣನನ್ನು ಆರಾಧಿಸಬೇಕು**

# 39. ಸಾಧಕರಿಗೆ ಸಾರಥಿಯಾಗಿ

ಭಾಗವತ, ಭಾರತ, ಪುರಾಣಗಳಲ್ಲಿ ಶ್ರೀಕೃಷ್ಣನ ನೂರಾರು ಲೀಲೆಗಳನ್ನು ರಸವತ್ತಾಗಿ ವರ್ಣಿಸಿದೆ. ಅವುಗಳೆಲ್ಲವೂ ಭಾವುಕರಿಗೆ ಆಪ್ಯಾಯಮಾನವಾಗಿವೆ. ಅವುಗಳಿಗೆಲ್ಲ ಅಧ್ಯಾತ್ಮಸಾಧಕರೂ ಮುಮುಕ್ಷುಗಳೂ ತತ್ತ್ವಜಿಜ್ಞಾಸುಗಳೂ ಆದ ನಾವುಗಳು ಅಷ್ಟೊಂದು ಮಹತ್ತ್ವವನ್ನು ಕೊಡಬೇಕಾಗಿಲ್ಲ. ಏಕೆಂದರೆ ಅವು ಗಳೆಲ್ಲವೂ ಭಾವನಾತ್ಮಕವಾದ ಕವಿಗಳ ವರ್ಣನೆಗಳಾಗಿರುತ್ತವೆ.

ನಮಗೆ ಬೇಕಾದದ್ದು ಆತ್ಮಜ್ಞಾನ. ಆತ್ಮಜ್ಞಾನಪ್ರಾಪ್ತಿಗೆ ಸಹಕಾರಿಯಾಗುವಂತೆ ಸಹಾಯವಾಗುವಂತೆ ಶ್ರೀಕೃಷ್ಣನ ಮಹಿಮೆಗಳನ್ನು ನಾವು ನೋಡೋಣ. ಹಾಗಾದರೆ ನಾವು ಶ್ರೀಕೃಷ್ಣನನ್ನು ಏನೆಂದು ಉಪಾಸನೆಮಾಡಬೇಕು? ಎಂದರೆ, **"ಸಾಧಕರಿಗೆ ಸಾರಥಿಯಾಗಿ"** ಎಂದು ಕೃಷ್ಣನನ್ನು ಭಾವಿಸಬೇಕು.

ಶ್ರೀಕೃಷ್ಣನು ಅರ್ಜುನನಿಗೆ ಸಾರಥಿಯಾಗಿದ್ದನು ಎಂಬ ವಿಷಯವು ಸರ್ವ ವಿದಿತವೂ ಸರ್ವಸಂಮತವೂ ಆಗಿರುತ್ತದೆಯಲ್ಲವೇ? ಏಕೆಂದರೆ **"ಅರ್ಜುನ ಸಾರಥಿ"** ಎಂದೇ ಕೃಷ್ಣನಿಗೆ ಬಿರುದಿರುವುದು ಸರ್ವವಿದಿತ. ದುಃಖಸಾಗರದಲ್ಲಿ ಮಗ್ನನಾಗಿದ್ದ ಅರ್ಜುನನನ್ನು, ಸಾರಥಿಯಾಗಿದ್ದ ಕೃಷ್ಣನು ಉದ್ಧಾರಮಾಡಿದನೆಂಬ ವಿಷಯವು ನಮ್ಮೆಲ್ಲರಿಗೂ ತಿಳಿದಿದೆಯಲ್ಲವೇ? ಶೋಕಮೋಹಗಳಿಂದ ದುಃಖ ತಪ್ತನಾಗಿದ್ದ ಅರ್ಜುನನು, ಶ್ರೀಕೃಷ್ಣನ ಉಪದೇಶಗಳನ್ನು ಕೇಳಿ ಶೋಕಮೋಹ ಗಳಿಂದ ಮುಕ್ತನಾದನು. ಅರ್ಜುನನೇ ಕಡೆಯಲ್ಲಿ **ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್‌ಪ್ರಸಾದಾತ್ ಮಯಾಽಚ್ಯುತ** ಎಂದು ಹೇಳಿದ್ದಾನೆ.

ಇಂಥ ಶ್ರೀಕೃಷ್ಣನು ಭವಸಾಗರದಲ್ಲಿ ಮುಳುಗಿರುವ ಎಲ್ಲಾ ಅಧ್ಯಾತ್ಮ ಸಾಧಕರನ್ನೂ ಆತ್ಮಜ್ಞಾನವೆಂಬ ದೋಣಿಯಿಂದ ಮೋಕ್ಷವೆಂಬ ದಡಕ್ಕೆ ಸೇರಿಸುವ ಅಂಬಿಗನಾಗಿರುತ್ತಾನೆ. ಮುಮುಕ್ಷು ಸಾಧಕರುಗಳನ್ನು ಬ್ರಹ್ಮವಿದ್ಯೆಯೆಂಬ ರಥದ ಮೂಲಕ ಬ್ರಹ್ಮಾನಂದಪದವಿಗೆ ಕೊಂಡೊಯ್ಯುವ ಸಾರಥಿಯೂ ಆಗಿರುತ್ತಾನೆ. ಇದನ್ನೇ ಭಗವಂತನು ಹೇಳಿಯೂ ಇದ್ದಾನೆ:

**ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ।**
**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್॥**

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ॥**

ಭಗವದ್ಗೀತಾ ೧೮-೬೪, ೬೫

**ಶ್ರೀಕೃಷ್ಣನನ್ನು 'ಮುಮುಕ್ಷುಸಾರಥಿ' ಎಂದು ತಿಳಿದು ಪೂಜಿಸಬೇಕು**

## ವಿದ್ವಾನ್ ಡಾ॥ ಕೆ. ಜಿ. ಸುಬ್ರಾಯಶರ್ಮಾರವರ ವೇದಾಂತ ಗ್ರಂಥಗಳು

1. "ವಿವೇಕಭಾಸ್ಕರ"
2. "ಶಾಂಕರ ಸಂವತ್ಸರ"
3. "ವೇದಾಂತ ಸಂವತ್ಸರ"
4. "ಗೀತಾ ಸಂವತ್ಸರ"
5. "ಸುಭಾಷಿತ ಸಂವತ್ಸರ"
6. "ಪ್ರಬೋಧ ಚಿಂತಾಮಣಿ"
7. "ಜ್ಞಾನಾಮೃತಬಿಂದು"
8. "ಗೀತೋಪದೇಶಾಮೃತ"
9. "ಜರ್ಮನಿಯಲ್ಲಿ ಶರ್ಮರು"
10. ವಿದ್ವಾನ್ ಕೆ. ಜಿ. ಸುಬ್ರಾಯಶರ್ಮಾ
11. "ವ್ಯಾಸ ಪೂರ್ಣಿಮಾ"
12. "ಕೇನ ರಸಾಯನ"
13. "ಜೀವನ್ಮುಕ್ತ ಚತುಷ್ಟಯ"
14. "ಶಿವರಾತ್ರಿ"
15. "ನವೋಪನಿಷದಃ"
16. "ಶಾಂತಿಮಂತ್ರಗಳು"
17. "ವೇದಮಹಿಮೆ"
18. "50 Reflections on Morals"
19. "ಪೀಯೂಷ ಧಾರಾ"
20. "ಆದಿಗುರು ಶಂಕರ"
21. "48 'ಅಷ್ಟಕ' ಸ್ತೋತ್ರಗಳು"
22. "ಕನ್ನಡ ಶಂಕರ"
23. "ಆರಾಧನ ಸಂದೇಶ"
24. "ಸರಳ ರಮಣ"
25. "ನ ಹಿ ಜ್ಞಾನೇನ ಸದೃಶಂ"
26. "ಉಪದೇಶಸಿಂಚನಂ"
27. "ಸುದಿನಂ"
28. "ಶಂಕರಜಯಂತೀ"
29. "ಬಾಲರಾಮಾಯಣಂ"
30. "ಸಂದೇಶಾಮೃತ"
31. "ವಿಭೂತಿರೂಪಿಕೃಷ್ಣ"
32. "ಅಧ್ಯಾರೋಪಾಪವಾದ"
33. "ಶಂಕರ Ph.D."
34. "ಗೌಡಪಾದಾಮೃತ"
35. "ವೇದಾಂತಮಕರಂದ"
36. "ಶ್ರೀರಮಣಸುಧಾ"
37. "ಧರ್ಮ–ವೇದ–ಬ್ರಹ್ಮ"
38. "ಸದ್ಗುರೂಪಾಸನಂ"
39. "ಜನ್ಮಾಂತರ"
40. "ಗೀತಾಕಲ್ಪತರು"
41. "ಮಹರ್ಷಿಗಳು"
42. "ಉಪನಯನಂ"
43. "ಔಪನಿಷದ ಪುರುಷ"
44. "ಸಂಸ್ಕೃತ ವೈಭವ"
45. "ತೈತ್ತಿರೀಯದ ತಿರುಳು"
46. "ರಾಮಾಂಜನೇಯ"
47. ವೇದಾಂತದಲ್ಲಿನ ಪದಗಳೂ ಅರ್ಥಗಳೂ
48. "ತತ್ತ್ವಮಸಿ"
49. "ಬ್ರಹ್ಮಜ್ಞಾನಫಲಂ"
50. "ಜ್ಞಾನಸಾಧನಗಳು"
51. "108 'ಅಷ್ಟಕ' ಸ್ತೋತ್ರಗಳು"
52. "ಚತುಷ್ಟಯ ಸಂಗ್ರಹ"
53. "ಸಂಗ್ರಾಹಕ ಶ್ಲೋಕಗಳು"
54. "ಶ್ರೀಶ್ರೀಗಳ ಸಂಶೋಧನೆ"
55. "ಮಹರ್ಷಿಗಳ 'ಅಷ್ಟಕ' ಸ್ತೋತ್ರಗಳು"
56. "ಶಾಂಕರ ಮಕರಂದ"
57. "ನೀತಿ ಶ್ಲೋಕಗಳು"
58. "ಕೈವಲ್ಯೋಪನಿಷತ್"
59. "ವಿವೇಕ ರತ್ನ"
60. "ಗುರುಶಿಷ್ಯ ಸಂಬಂಧ"
61. "ಲಕ್ಷಣ ಶ್ಲೋಕಗಳು"
62. "ಶ್ರೀರಮಣರ ಉಪದೇಶಸಾರ"
63. "ಅಜ್ಞಾನ ವಿಮುಕ್ತಿ"
64. "ವಂದೇ ಶಂಕರಸದ್ಗುರುಮ್"
65. "ಚತುಸ್ಸೂತ್ರೀಭಾಷ್ಯಸಾರ"
66. ಶ್ರೀರಮಣಮಹರ್ಷಿಗಳ "ಸದ್ದರ್ಶನಮ್"
67. "ತಸ್ಮೈ ಶ್ರೀಗುರವೇ ನಮಃ"
68. "ಗೀತೋಪನಿಷತ್"
69. "ಪ್ರಸ್ಥಾನತ್ರಯಂ"
70. "ಪ್ರಥಮ ಪುಸ್ತಕಂ"
71. "ನನ್ನ ಗುರುಕುಲವಾಸ"
72. "ವೇದಾಂಗಗಳು"
73. "ಗೀತಾಜಯಂತೀ"
74. "ಶಂಕರಹೃದಯಂ"
75. "ಮಕ್ಕಳಿಗಾಗಿ ಸ್ತೋತ್ರಗಳು"
76. "ಗೀತೆಯಲ್ಲಿ ಗುಣವಿಮರ್ಶೆ"
77. "ಸದ್ಗುರುಭಾಸ್ಕರ"
78. "ಶಾಂಕರಭಾಷ್ಯಾಮೃತಂ"
79. "ಶ್ರೀಸುರೇಶ್ವರರ ಸಿಂಹಗರ್ಜನೆ"
80. "ಉಪಮಾ ಕಾಳಿದಾಸಸ್ಯ"
81. "ಪ್ರಣವೋಪಾಸನಂ"
82. "ಕವಿಮುನಿ ಕಂಡ ಶಿವ"
83. "ಬ್ರಾಹ್ಮೀಸ್ಥಿತಿಗೆ 40 ಸೋಪಾನಗಳು"
84. "ಶಾಂಕರಬೋಧಾಮೃತಂ"

85. **"ಪ್ರಬೋಧ ಶ್ಲೋಕಗಳು"**
86. **"ವೇದಾಂತಡಿಂಡಿಮಸಾರ"**
87. **"ಶತಕತ್ರಯಸಾರ"**
88. **"ಪಂಚಕ ಪಂಚಕಂ"**
89. **"ನೈಷ್ಕರ್ಮ್ಯಸಿದ್ಧಿಸಾರ"**
90. **"ಈಶಾವಾಸ್ಯಮಿದಂ ಸರ್ವಂ"**
91. **"ಮಾತೃದೇವೋ ಭವ"**
92. **"ಸುರೇಶ್ವರ ಸಂವತ್ಸರ"**
93. **"70ರ ವೀರವೇದಾಂತಿ"**
94. **"ತುರೀಯಂ ಪದಂ"**
95. **"ಬ್ರಹ್ಮಚರ್ಯವ್ರತಂ"**
96. **"ಗೀತೆಯಲ್ಲಿ ಸಾಂಖ್ಯಯೋಗ"**
97. **"ಶ್ರವಣದ ಮಹತ್ತ್ವ"**
98. **"ವಿದುರನೀತಿಸಾರ"**
99. **"ದಾನದ ಮಹಿಮೆ"**
100. **"ಅದ್ಭುತ ಶಂಕರ"**
101. **"ಸೂರ್ಯೋಪಾಸನಂ"**
102. **"ಕೃಷ್ಣಂ ವಂದೇ ಜಗದ್ಗುರುಂ"**

## ವೇದಾಂತ ಪ್ರವಚನಗಳು M.P. 3 ಸಿ.ಡಿ.ಗಳಲ್ಲಿ ಲಭ್ಯವಿವೆ

1. ದಶೋಪನಿಷತ್ತುಗಳ ಸಂದೇಶಗಳು (10 ಗಂಟೆಗಳು)
2. ಬ್ರಹ್ಮಸೂತ್ರಶಾಂಕರಭಾಷ್ಯ, ಚತುಸ್ಸೂತ್ರೀಭಾಷ್ಯ (56 ಗಂಟೆಗಳು)
3. ಶ್ವೇತಾಶ್ವತರೋಪನಿಷತ್ ಶಾಂಕರಭಾಷ್ಯಂ (108 ಗಂಟೆಗಳು)
4. ಐತರೇಯೋಪನಿಷತ್ ಶಾಂಕರಭಾಷ್ಯಂ (48 ಗಂಟೆಗಳು)
5. ಈಶಾವಾಸ್ಯೋಪನಿಷತ್ ಶಾಂಕರಭಾಷ್ಯಂ (28 ಗಂಟೆಗಳು)
6. ಅಧ್ಯಾರೋಪ ಅಪವಾದಪ್ರಕ್ರಿಯೆ (90 ನಿಮಿಷಗಳು)
7. ನಮಗೆ ಇಂದು ವೇದಾಂತ ಬೇಕೇ? (90 ನಿಮಿಷಗಳು)
8. ಮುಂಡಕೋಪನಿಷತ್–ಶಾಂಕರಭಾಷ್ಯಮ್ (45 ಗಂಟೆಗಳು)
9. ಕಾಠಕೋಪನಿಷತ್–ಶಾಂಕರಭಾಷ್ಯಮ್ (69 ಗಂಟೆಗಳು)
10. ದ್ವಾದಶವೇದಾಂತರತ್ನಮಾಲಿಕಾ (13 ಗಂಟೆಗಳು)
11. ದಶೋಪನಿಷತ್ತುಗಳ ಪ್ರವಚನಗಳು (DVD 10 ಗಂಟೆಗಳು)
12. अध्यारोपापवादमहिमा (60 ನಿಮಿಷ)
13. Avasthaatraya Prakriya (60 Minutes)
14. माण्डूक्यरहस्यविवृति (60 ನಿಮಿಷ)
15. ಭಗವದ್ಗೀತೋಪನ್ಯಾಸ (DVD)
16. ತೈತ್ತಿರೀಯ, ಪುರುಷಸೂಕ್ತ ಮಂತ್ರ ಪಠನ
17. ಬ್ರಹ್ಮಸೂತ್ರಸಾರ (DVD)
18. Power of Shaanthi Manthras
19. Essence of the Maandukya Upanishad
20. "ಕನ್ನಡ ಶಂಕರ"—ಶ್ರೀ ಶ್ರೀ ಸ್ವಾಮಿಗಳವರು
21. Sri Shankara Bhagavathpaadaachaarya
22. ಮಾಂಡೂಕ್ಯೋಪನಿಷತ್ಸಾರ
23. ೭೦ ಶಾಂಕರಭಾಷ್ಯಪ್ರವಚನಗಳ ಸಾರ
24. ಶ್ರೀಶಂಕರರ ನಿರ್ವಾಣಷಟ್ಕಮ್
25. ವ್ಯಾಸಪೂಜಾ, ಗುರ್ವಷ್ಟಕಮ್
26. ತೈತ್ತಿರೀಯೋಪನಿಷತ್ ಶಾಂಕರಭಾಷ್ಯಂ (120 ಗಂಟೆಗಳು)
27. वेदान्तप्रक्रियाप्रत्यभिज्ञा

---

**ವಿವರಗಳಿಗೆ: ಡಾ॥ ಕೆ.ಜಿ.ಸುಬ್ರಾಯಶರ್ಮಾ ☎ 2639 6786; 9886281622**




“ದಾನದ ಮಹಿಮೆ”-99ನೇ ಗ್ರಂಥದ ಬಿಡುಗಡೆ ಸಮಾರಂಭದಲ್ಲಿ
ಶ್ರೀಯುತ ಜಿ. ಎಸ್. ಟಿ. ಪ್ರಭುರವರು ಸಭೆಯನ್ನುದ್ದೇಶಿಸಿ ಮಾತನಾಡುತ್ತಿದ್ದಾರೆ; 27-9-2018, ಗುರುವಾರ



“ದಾನದ ಮಹಿಮೆ”-99ನೇ ಕೃತಿರತ್ನದ ಬಿಡುಗಡೆ ಸಮಾರಂಭದಲ್ಲಿ
ವೇದಾಂತಾಭ್ಯಾಸಿಗಳಾದ ವಿದ್ಯಾರ್ಥಿಗಳು; 27-9-2018, ಗುರುವಾರ

